ಕನ್ನಡ ಪ್ರಪಂಚ ಸಾಹಿತ್ಯಮಾಲೆ—೨

ಕುಮಾರ ವೆಂಕಣ್ಣನವರ

# ಬೀದಿಯ ದೀಪ

(ಕಾದಂಬರಿ)

ಶ್ರೀ

1950

ಬೆಲೆ: ೧-೪-೦

ಕನ್ನಡ ಪ್ರಪಂಚ ಪ್ರಕಾಶನ,
ಗಣಪತಿ ಹೈಸ್ಕೂಲ್ ರಸ್ತೆ, ಮಂಗಳೂರು.

ಸಂಪಾದಕರು:
ಬಿ. ಶಂಕರ ಭಟ್ಟ
ಕೆ. ಎಮ್. ಆರ್. ಶೆಟ್ಟಿ

ಮೊದಲನೆಯ ಪುಸ್ತಕ

ಭಾರತೀಸುತರ—

# "ಧೂಮಕೇತುವಿನ ಮದುವೆ"

(ಕಥಾಸಂಕಲನ)

ಪುಟ 120 ಕ್ರಯ: ಒಂದು ರೂಪಾಯಿ

## ಮುಂದಿನ ಪುಸ್ತಕಗಳು

"ಈಶ್ವರ" ಅವರ—

# ಮಹಾತ್ಮರ ಮಾರ್ಗ

(ಜೀವನ ಪ್ರಬಂಧಗಳು)

---

ಕಾರ್ಯಹಳ್ಳಿ ರಾಮಕೃಷ್ಣ ಶೆಟ್ಟರ—

# ಅವಳ ಹುಚ್ಚು

(ಕಥಾಸಂಕಲನ)

ಮುದ್ರಕರು:
ಕೆನರಾ ಛಾಪಖಾನೆ,
ಮಂಗಳೂರು.

# ಮೊದಲ ಮಾತು

ಇದು ನನ್ನ ಮೂರನೆಯ ಕಾದಂಬರಿ. ಕನ್ನಡ ಜನಜೀವನದ ಬಗೆಗೆ ಬರೆಯುವ ಯತ್ನದಲ್ಲಿ, ಕನ್ನಡ ಜನತೆಗೆ ದಾರಿತೋರುವ ಸಾಹಸದಲ್ಲಿ ನಾನೆಷ್ಟು ಕೃತಕೃತ್ಯನಾಗಿದ್ದೇನೋ ಹೇಳಲಾರೆ ಆದರೆ, ಕರ್ತವ್ಯವನ್ನು ಮಾಡುವುದು ನನ್ನ ಧರ್ಮ.

ಈ ಕಾದಂಬರಿಗಳಿಂದ ಜನಜೀವನ ಹಸನಾಗಬಹುದು ಎಂದು ನಂಬುವ ಸ್ಥಿತಿಗೆ ಕನ್ನಡ ಸಾಹಿತ್ಯದ ಕೃತಿಗಳಿನ್ನೂ ಮುಟ್ಟಿಲ್ಲ. ನಾವೆಲ್ಲ ಮೇಲಿನ ಹಾಗೂ ಮಧ್ಯಮ ವರ್ಗಗಳ ವಿವಿಧ ಸಮಸ್ಯೆಗಳನ್ನಷ್ಟೇ ಬರೆಯಲು ಶಕ್ತರಾಗಿದ್ದೇವೆ. ದೇಶದ ಮಹಾಜನತೆಯಾದ ರೈತ ಕಾರ್ಮಿಕರ ಬಗೆಗೆ ಬರೆವ ಯೋಗ್ಯತೆ ನಮ್ಮ ಸಾಹಿತಿಗಳಿಗಿನ್ನೂ ಬಂದಿಲ್ಲ. ಕೆಲವೊಬ್ಬ ಸಾಹಿತಿಗಳು ತಾವು ಪ್ರಗತಿಶೀಲರು, ಬಡ ಜನತೆಯ ಬಗೆಗೆ ಬರೆಯುತ್ತೇವೆ ಎಂದುಕೊಂಡು ಬರೆಯಲು ಹೊರಟು ಬಡವರ ಬಾಳಿನ ಬಗೆಗೆ ಪರಿಹಾಸ್ಯ ಮಾಡಿದ್ದಾರೆ; ಅವರ ಜೀವನದ ಬಗೆಗೆ ಕರುಣೆ, ಅನುಕಂಪ ಮೂಡುವ ಬದಲು ಜುಗುಪ್ಸೆ ಮೂಡುವಂತೆ ಬರೆದು ತಮಗರಿಯದಂತೆ ತಾವೂ ಅವರ ವೈರಿಗಳೇ ಆಗಿದ್ದಾರೆ, ಎಂತಲೇ ದೀನ ದಲಿತರ ಜೀವನದ ಬಗೆಗೆ ಬರೆಯುತ್ತೇನೆ ಎನ್ನುವ ಧಾರ್ಷ್ಟ್ಯ ನನಗಿನ್ನೂ ಇಲ್ಲ.

ನಾನು ತ್ರಿಶಂಕುವಿನ ವಂಶಜರಾದ ಮಧ್ಯಮ ವರ್ಗದ ಬಗೆಗೇ ಅವರ ಜೀವನದ ವಿಚಾರವಾಗೇ ಬರೆದಿದ್ದೇನೆ ವಾಸ್ತವವಾಗಿ ಬಡಕೂಲಿಗಾರನಿಗಿರುವ ಸ್ವಾತಂತ್ರ್ಯ, ಧೈರ್ಯ, ನಿಶ್ಚಿಂತೆ, ವರಮಾನ, ತೃಪ್ತಿಗಳಾವುವೂ ಇಲ್ಲದಿದ್ದರೂ ಅವನಿಗಿಂತ ಮೇಲಿನವರೆಂದು ತಿಳಿಯುತ್ತೇವೆ, ಮಧ್ಯಮ ವರ್ಗದ ನಾವು. ಕಾರ್ಮಿಕ, ರೈತ, ದೀನ, ದಲಿತರ ಕಡೆಗೆ ನೋಡುವುದೂ ನಡೆಯುವುದೂ ನಮ್ಮ ಗೌರವಕ್ಕೆ ಕಡಿಮೆಯೆಂದು ತಿಳಿಯುತ್ತೇವೆ ಧನಿಕನೆಡೆಗೆ ನೋಡುತ್ತೇವೆ, ಅವನ ನೀತಿಗೆ, ರೀತಿಗೆ ಅನೀತಿಗಳಿಗೆ ತಲೆದೂಗುತ್ತೇವೆ; ಅವನು ಅಪೇಕ್ಷಿಸದಿದ್ದರೂ ಅವನ ಬೆಂಬಲಕ್ಕೆ ನಿಲ್ಲುತ್ತೇವೆ, ಇಂದಲ್ಲದಿದ್ದರೆ ನಾಳೆಯಾದರೂ ಧನಿಕ, ಬಂಡವಲಿಗ, ಜಮೀನ್ದಾರರಾಗುತ್ತೇವೆ ಎಂಬ ಕನಸು ಕಾಣುತ್ತೇವೆ, ಇಂಥ 'ದಾಸ' ನನ್ನು ಬಂಡವಲಿಗನು ಮಾತ್ರ ತನ್ನ ವರ್ಗದ ಸಮಾನ ಸ್ಥಾನಕ್ಕೆ ಆಹ್ವಾನಿಸುವುದೂ ಇಲ್ಲ, ಆದರಿಸುವುದೂ ಇಲ್ಲ, ಅವನೂ ತುಳಿಯುತ್ತಾನೆ.

ಈ ರೀತಿ ಧನಿಕನಿಂದ ತುಳಿಯಲ್ಪಟ್ಟರೂ ಅವನ ಎಂಜಲನ್ನೇ ತಿನ್ನುತ್ತ; ಬಡವ ಆದರಿಸಿದರೂ ಅವನೆಡೆ ತೆರಳದ ನಮ್ಮ ನಿಮ್ಮಂತಹ ವರ್ಗಕ್ಕೆ ತಂದೆ ಯಿಲ್ಲದ ಜನಾಂಗ ಅಥವಾ ಮಧ್ಯಮವರ್ಗ ಎನ್ನುತ್ತೇವೆ. ಇದು ಪ್ರತಿಯೊಂದು ದೇಶದ ದೇಶದ್ರೋಹಿಯೂ ದೇಶಪ್ರೇಮಿಯೂ ಆದ ವರ್ಗ ತನಗರಿಯು ದಂತೆ,—ಕಾರ್ಮಿಕರ, ಬಡವರ; ಮುಷ್ಕರ, ಹೋರಾಟ, ಸಂಘಟನೆಗಳನ್ನು ನಿಂದಿಸಿ, ಮುರಿದು, ಕೋಟ್ಯಾಧೀಶರ ಸುಪುತ್ರರಾಗುವ ವರ್ಗ. ಈ ವರ್ಗದ ಬಗೆಗೆ ಬರೆದು ಅದನ್ನು ಸರಿದಾರಿಗೆ ಸರಿಸಿ ಅದು ದಲಿತರ ಬೆಂಬಲಕ್ಕೆ ನಿಲ್ಲು ವಂತೆ ಮಾಡಲು ಸಾಹಿತ್ಯ ನೆರವಾದರೆ ಸಾಲದೇ?

ಮಧ್ಯಮ ವರ್ಗದ ಆದರ್ಶಜೀವಿಯ ಕತೆ ಈ ಕಾದಂಬರಿ; ಅಷ್ಟೆ! ಕನ್ನಡ ನಾಡಿನ ಕೆಲವಾರು 'ಮಾಣಿ'ಗಳಾದರೂ ಈ ಕೃತಿಯಿಂದ ಉಪಕೃತರಾದರೆ ಸಾಕು

"ಅನ್ನಪೂರ್ಣ" ವಿಶ್ವೇಶ್ವರಪುರಂ,
ಬೆಂಗಳೂರು ನಗರ.
ಫೆಬ್ರವರಿ, ೧೯೫೦.

ಕುಮಾರ ವೆಂಕಣ್ಣ.

# ಒಂದು

ಬೀಡಿ . . . . ಬೀಡಾ . . . . ಸಿಗರೇಟ್

. . . . . . . . . . . . . .

ಬೀಡಿ . . . . ಬೀಡಾ . . . . ಚಾಕಲೇಟ್ . . ಪೆಪ್ಪರ್‌ಮಿಂಟ್ . . . . ಚಾಕಲೇಟ್.

ಮೈದಾನಿನ ನಡುವೆ ನಿಂತ ಗೂಡಿನೊಳಗಿಂದ ರೇಡಿಯೋ ಒಂದೇ ಸವನೆ ಹೊಡೆದುಕೊಳ್ಳುತ್ತಿದೆ. ಆ ಕೂಗನ್ನೂ ಮೀರಿಸಿ ಈ ಕೂಗು ಕೇಳಿ ಸುತ್ತಿದೆ. ಸುಮಾರು ಹನ್ನೆರಡು ವರುಷದ ಬಾಲಕನೊಬ್ಬ ತನ್ನ ಕತ್ತಿಗೆ ಪೆಟ್ಟಿಗೆಯ ಮುಚ್ಚಳದಂತಹ ಹಲಿಗೆಯೊಂದನ್ನು ತೂಗಹಾಕಿಕೊಂಡಿದ್ದಾನೆ. ಅದರಲ್ಲಿ ಕೆಲವು ಬಿಸ್ಕತ್ತು, ಪೆಪ್ಪರ್‌ಮಿಂಟ್, ಚಾಕಲೇಟ್, ಎಣ್ಣೆ ಬೆಲ್ಲದಿಂದ ತಯಾರಾದ ಉಂಡೆಗಳಿಂದ ತುಂಬಿದ ಜಾಡಿಗಳು ಮತ್ತು ಬೀಡಿ, ಬೀಡಾ, ಸಿಗರೇಟ್ ತುಂಬಿದೆ. ದೇವದಾರು ಮರದ ಈ ಹಲಿಗೆ ತೆಂಗಿನ ನಾರಿನ ಹಗ್ಗದ ಸಹಾಯದಿಂದ ಅವನ ಕತ್ತಿನಲ್ಲಿ ತೂಗಾಡುತ್ತಿದೆ. ಅದರ ಒಂದು ಬದಿ ಅವನ ಹೊಟ್ಟೆಗೆ ತಗಲಿದೆ. ಎಂತಲೇ ಇಡೀ ಹಲಿಗೆ ಅವನನ್ನು ತಾಗಿ ನಿಂತಿದೆ. ಬಡತನದ ಬಾಳಿನ ಎಲ್ಲ ಸಿಹಿ ಕಹಿಗಳ, ಸೌಂದರ್ಯದ ರಸ ಪಾಕದಂತಿದೆ ಈ ತೂಗಾಡುವ ಅಂಗಡಿ.

ನಮ್ಮೂರಿನ ವಿಹಾರಿಗಳಿಗೆ ಸುಲಭವಾಗಿ ದೊರೆಯುವ ವಿಹಾರ ಪ್ರದೇಶಗಳೆಂದರೆ ಎರಡು. ಒಂದು ಈ ಮೈದಾನು; ಎರಡನೆಯದು ಸಮುದ್ರ ದಂಡೆ. ಸಂಜೆಯಾಗುತ್ತ ಬಂದು, ಬಿಸಿಲು ಕಡಿಮೆಯಾಗತೊಡಗಿತೆಂದರೆ ಊರಿನ ವಿಹಾರಿಗಳೆಲ್ಲ ಈ ಎರಡು ಕಡೆ ಹರಡಿಕೊಳ್ಳುತ್ತಾರೆ. ಒಂದಷ್ಟು ಗಾಳಿಯನ್ನು ತಮ್ಮ ಮೈ ತಣಿಸಿಕೊಳ್ಳಲು ಉಪಯೋಗಿಸಿಕೊಳ್ಳುತ್ತಾರೆ.

ಒಂದೆಡೆ ವಿದ್ಯಾರ್ಥಿಗಳು ಚೆಂಡಾಟವನ್ನಾಡುತ್ತ ಕೇಕೆ ಹಾಕಿ ಕುಣಿ ಯುತ್ತಿದ್ದಾರೆ. ಇನ್ನೊಂದೆಡೆ ಬಟ್ಟೆ ಹರಾಜು ಹಾಕುವವರಿಂದ ಮೊದ ಲ್ಗೊಂಡು, ನೀಲಗಿರಿ ಎಣ್ಣೆ ವಿಕ್ರಯಿಸುವವರ ವರೆಗೆ ತುಂಬಿದ ವ್ಯಾಪಾರಿ ಗಳ ಗೊಂದಲ. ನೀಲಗಿರಿ ಎಣ್ಣೆ ವಿಕ್ರಯಿಸುವವನು ತನಗೆ ಭಾಷೆ ತಿಳಿ ದಿದ್ದರೂ ಹಿಂದುಸ್ತಾನಿಯಲ್ಲೇ ಭಾಷಣ ಕೊಡುತ್ತಾನೆ. ಅದೇ ಮೈದಾನಿ

ನಲ್ಲೇ ಅವನಿಗೆ ಅಂಟಿಕೊಂಡ ಶಿಷ್ಯನೊಬ್ಬ ಈ ಭಾಷಣವನ್ನು ಗಂಭೀರ ವಾಗಿ ತುಳು ಭಾಷೆಗೆ ಭಾಷಾಂತರಿಸುತ್ತಾನೆ. ಇನ್ನೇನು ಈ ಇಸ್ಪೀಟು ನಿಮ್ಮ ಕಣ್ಣೆದಿರೇ ಈ ಕಡೆ ನಿಂತ ತಲೆಬುರುಡೆಯೆಡೆ ಹಾರಿ ಬರುತ್ತದೆ. ಮಾಯವಲ್ಲ, ಮಂತ್ರವಲ್ಲ, ದೆವ್ವದ ಆಟವಲ್ಲ; ಕೇವಲ ಕೈಚಳಕ. "ಎಲ್ಲಿ . . . ಎಲ್ಲರೂ ಒಮ್ಮೆ ಚಪ್ಪಾಳೆ ತಟ್ಟಿ" ಎಂದು ನಮ್ಮ ಜನರು ನಿಜ ವಾಗಿಯೂ ಕುರಿಗಳೆಂಬುದನ್ನು ದೃಢಮಾಡಿಕೊಳ್ಳುತ್ತಾನೆ. ಬಟ್ಟೆಯೊಂದನ್ನು ಕೊಂಚ ನೀಲಗಿರಿ ಎಣ್ಣೆಯಲ್ಲಿ ಅದ್ದಿ ಅದಕ್ಕೆ ಬೆಂಕಿ ತಗಲಿಸಿ, "ನೋಡಿ, ಹೇಗೆ ಉರಿಯುತ್ತದೆ? ಈಗ ಆರಿಸಿಬಿಟ್ಟೆ. ಬಟ್ಟೆ ಸುಟ್ಟು ಹೋಗಿದೆಯೇ ನೋಡಿ. ಇದು ಎಣ್ಣೆಯ ಮಹತ್ವ. ಯಾರು . . . . ದಯವಿಟ್ಟು ಹಿಂದಕ್ಕೆ ಸರಿಯಿರಿ. ಹ್ಞಾಂ . . . . . ಒಮ್ಮೆ ಚಪ್ಪಾಳೆ ತಟ್ಟಿ" ಎಂದು ಜನರ ದೃಷ್ಟಿಯನ್ನು ತನ್ನ ಸರಕಿನೆಡೆ ಸೆಳೆಯುತ್ತಿದ್ದಂತೆ ಒಬ್ಬ ನಾಯಕನ ಹಿಂದೆ ಅವನೆಷ್ಟು ಮೂರ್ಖನೇ ಆದರೂ ನಡೆಯುವ ಕುರಿಗಳು ಈ ಜನರು ಎಂಬುದನ್ನು ಲೋಕಕ್ಕೆ ಸಾರುತ್ತಾನೆ. ತನ್ನ ಪ್ರಶಸ್ತಿ ಬೆಳೆಸಿಕೊಳ್ಳುತ್ತಾನೆ. ವ್ಯಾಪಾರ ನಡೆಸುತ್ತಾನೆ.

ಇವನ ಗೊಂದಲವನ್ನೂ ಮೀರಿಸುವ ಧ್ವನಿಯಲ್ಲಿ ಬಟ್ಟೆ ಹರಾಜು ಹಾಕುವವನು ತನ್ನ ಸರಕಿನ ಬಗ್ಗೆ ಭಾಷಣವಿತ್ತು, ಬಟ್ಟೆ ವಿಕ್ರೀತವಾಗ ದಿದ್ದರೂ ಒಂದು ವಾರ್—ಎರಡು ವಾರ್—ಮೂರು ವಾರ್—ಎಂದು ಹತ್ತಾರು ಬಾರಿ ಕೂಗಿ ಜನರನ್ನು ತನ್ನೆಡೆ ಸೆಳೆಯುತ್ತಾನೆ. ನೀಲಗಿರಿ ಎಣ್ಣೆ ಮಾರುವವನು ನಮ್ಮ ದೇಶದ ರಾಜಕಾರಣಿಗಳಂತೆ ಜನರ ದೃಷ್ಟಿಯನ್ನು ಅಸಂಬದ್ಧವಾದ ಇಸ್ಪೀಟ್ ಎಲೆಗಳ ಕಡೆ ತಿರುಗಿಸಿ ತನ್ನ ಕಾರ್ಯ ಸಾಧಿಸುತ್ತಾನೆ. ಆದರೆ, ಬಟ್ಟೆ ಮಾರುವವನಿಗೆ ಈ ಆಟ ಸಾಧ್ಯವಿಲ್ಲ ಅವನದೇನಿದ್ದರೂ ಬಟ್ಟೆಯ ಬಗ್ಗೆ ಭಾಷಣ.

ಈ ನಡುವೆ 'ಸೋಡಾ ವಾಟರ್' ವ್ಯಾಪಾರ ಮಾಡುವವರ ಕೂಗು ಬೇರೆ. ಗಿರಾಕಿಯನ್ನು ಸೆಳೆಯಲು ಬಾಟಲಿಯ ಗೋಲಿಯನ್ನು ಒಂದು ಫರ್ಲಾಂಗ್ ದೂರ ಕೇಳಿಸುವಂತೆ ಸದ್ದು ಮಾಡಿ, ಒತ್ತಿ, ಪುನಃ ಅದನ್ನು ಇದ್ದ ಸ್ಥಾನದಲ್ಲೇ ನಿಲ್ಲಿಸಿ, ಸೋಡಾ–ಲೆಮನೇಡ್–ಎಂದು ಕೂಗಾಡುವ ಗಲಭೆ. ಈ ಕೈಚಳಕ ಬಾಯಿ ಚಳಕಕ್ಕೆ ತಾಳ ಹಾಕುವಂತೆ "ಮೃಗ ರಾಜನೇ—ಕಣ್ಣಿರುವ ಮೃಗರಾಜನೇ ಕಣ್ಣಿಲ್ಲತವನಿಕೆ ತರ್ಮ ಕೊಡಿ"

ಎನ್ನುವ ಕೇರಳದ ಬಂಧುಗಳ ಕೂಗು. ವಾರಕ್ಕೊಂದೋ ಎರಡೋ ಬಾರಿ ಇಲ್ಲಿ ಸಂಗೀತ ಬೇರೆ ನಡೆಯುತ್ತೆ. ಬೇಸಿಗೆ ಬಂತೆಂದರೆ ವರ್ಷಂಪ್ರತಿ ಸರ್ಕಸ್ಸೋ, ನಾಟಕ ಕಂಪೆನಿಯೋ ಮೈದಾನಿನ ಒಂದು ಭಾಗವನ್ನು ಆಕ್ರಮಿಸುತ್ತದೆ.

ಮಧ್ಯಾಹ್ನ ನಾಲ್ಕು ಗಂಟೆಯ ವರೆಗೂ ಬೀದಿಯಲ್ಲಿ ನಡೆಯುವವರಿಗೆ ಬಿಸಿಲುಗುದುರೆಯನ್ನು ತೋರಿಸುವ ಈ ಮೈದಾನು ನಾಲ್ಕುವರೆ ತಾಸು ಕಳೆಯಿತೆಂದರೆ ಇಂತಹ ಹತ್ತಾರು ದೃಶ್ಯಗಳಿಂದ ಮೆರೆದು ಸಜೀವವಾಗುತ್ತದೆ. ಅಲ್ಲಷ್ಟು ಇಲ್ಲಷ್ಟು ಜನ ನಿಬಿಡವಾಗಿ ಕೂಡುತ್ತಾರೆ. ಮರಗಿಡಗಳಿಲ್ಲವಾದರೂ ಇದು ಉದ್ಯಾನವಾಗುತ್ತದೆ; ಏರು ತಗ್ಗುಗಳಿದ್ದರೂ ಮೈದಾನ ಎನ್ನಿಸಿದೆ.

ಮೊನ್ನೆ ಮೊನ್ನೆಯ ವರೆಗೂ ಬೋಳು ನೆಲವಾಗಿದ್ದ ಇಲ್ಲಿ ಇದೀಗ ಒಂದು ಗೂಡು ಕಾಣಿಸಿಕೊಂಡಿವೆ. ಹತ್ತು ಹದಿನೈದು ಅಡಿ ಚದರದ ಸಮಾಧಿಯಾಕಾರದ ಗೂಡೊಂದನ್ನು ಕಟ್ಟಿ ಅದರೊಳಗೊಂದು ರೇಡಿಯೋ ಇರಿಸಿದ್ದಾರೆ ನಗರ ಸಭೆಯವರು. ಒಳಗಡೆ ರೇಡಿಯೋ, ಬ್ಯಾಟರಿ, ಮೇಜು, ಕುರ್ಚಿ—ಗುಮಾಸ್ತೆಗೆ ಕುಳಿತುಕೊಳ್ಳಲು ಎಡೆ—ಅಷ್ಟೇ ಸ್ಥಳ. ಬೇರೆ ಯಾರಾದರೂ ಒಳ ಹೊಕ್ಕರೆಂದಾದರೆ ಆ ರೇಡಿಯೋವೇ ಹೊರ ಬರಬೇಕಾಗುತ್ತೆ. ಗೂಡಿನ ತಲೆಯ ಮೇಲೆ ನಾಲ್ಕು ಧ್ವನಿವಾಹಕಗಳು. ಅವೂ, ಕೆಲಬಾರಿ ಸ್ವರ ಸರಬರಾಜು ಮಾಡಿದರೆ, ಇನ್ನು ಕೆಲದಿನ ಮುಷ್ಕರ ಹೂಡುತ್ತವೆ. ಕಾಗೆಗಳೋ, ಗೂಬೆಗಳೋ ಇದೂ ಗೂಡು ಎಂದು ಕೊಂಡು ಅಲ್ಲಿ ನೆಲಸಿರಬಹುದು; ಅದಕ್ಕೇ ಹಾಡಿನ ಧ್ವನಿ ಅಷ್ಟು ಕರ್ಕಶ ಎಂದು ಆಡಿಕೊಳ್ಳುವವರೂ ಇದ್ದಾರೆ. ಯಾರೋ ಧರ್ಮಾತ್ಮರು ತಮ್ಮ ಆತ್ಮೀಯರ ಸ್ಮಾರಕವಾಗಿ ಇದನ್ನು ಕಟ್ಟಿಸಿದರು. ಆ ಆತ್ಮೀಯತೆಯಷ್ಟೇ ದೊಡ್ಡದಿದೆ ಇದು! ಅಷ್ಟೇ ಆತ್ಮೀಯತೆಯಿಂದ ನಗರ ಸಭೆಯವರೂ ಇದರ ಮೇಲ್ವಿಚಾರ ನಡೆಸುತ್ತಿದ್ದಾರೆ. ಆದರೂ ಆಫೀಸುಗಳಿಂದ, ತಮ್ಮ ಉದ್ಯಮಗಳಿಂದ ಬಿಡುಗಡೆ ಹೊಂದಿದೊಡನೆ ಹೆಚ್ಚಿನವರು ಈ ಗೂಡಿನ ಇದಿರಿನಿಂದ ಮನೆಕಡೆ ಹಾದು ಹೋಗುತ್ತಾರೆ. ಅನೇಕರು ಇದರ ಸುತ್ತಲೂ ವಿರಮಿಸುತ್ತಾರೆ.

ವಿಹಾರಿಗಳಿಗಾಗಿ ಈ ಗೂಡಿನ ಸುತ್ತಲೂ ಸಿಮೆಂಟಿನ ಸೋಫಾಗಳನ್ನು ನಿಲ್ಲಿಸಿದ್ದಾರೆ. ತಮ್ಮ ಕೆಲಸಗಳಿಗಾಗಿ ಕುಳಿತು, ಅಲ್ಲಿನ ಕುರ್ಚಿಗಳು ಬಿಸಿ

ಏರಿದುವೆಂದು ಹೊರಟು ಬಂದ ಜನ, ಬಿಸಿಲಿಗೆ ಕಾದು ಬಿಸಿ ಏರಿರುವ ಈ ಸೋಫಾಗಳನ್ನು ಅಲಂಕರಿಸುತ್ತಾರೆ. ರೇಡಿಯೋ ತನ್ನ ಪಾಡಿಗೆ ಹಾಡುತ್ತ ಸಾಗುತ್ತದೆ. ಅದನ್ನು ಕೇಳಲೆಂದು ಬಂದವರು ಅಲ್ಲಲ್ಲಿ ಗುಂಪು ಕೂಡಿ ತಮ್ಮ ತಮ್ಮ ರಾಜಕೀಯಗಳಲ್ಲೇ ನಿರತರಾಗುತ್ತಾರೆ. ಒಬ್ಬೊಬ್ಬರದೂ ಒಂದೊಂದು ಸಮಸ್ಯೆ. ಆದರೂ—ತಮ್ಮ ಗುಂಪಿಗೆ ಸೇರದವರ ಬಗ್ಗೆ ಮಾತನಾಡುವ ವಿಚಾರದಲ್ಲಿ ಎಲ್ಲರೂ ಒಂದೇ. ಊರ ಸಾವಿರ ಸಮಸ್ಯೆ ಗಳನ್ನು ಎತ್ತಿ, ಪಕ್ಕದ ಮನೆಯವರಿಂದ ತೊಡಗಿ ಬ್ರಿಟನ್ ಅಮೇರಿಕೆಗಳ ವರೆಗೆ ಎಲ್ಲ ವಿಷಯಗಳಿಗೂ ಎಡೆ ಮೈದಾನು.

ಸಂಗೀತವೆಂಬ ಬೊಬ್ಬೆ ಹೊಡೆಯುವದನ್ನು ನಿಲ್ಲಿಸಿ ರೇಡಿಯೋ ವಾರ್ತೆ ಸಾರಲು ಆರಂಭಿಸಿತೆಂದರೆ ವಾರ್ತಾವಾಹಿನಿಗಳೆಲ್ಲ ತಮ್ಮ ಹರಟೆ ನಿಲ್ಲಿಸುತ್ತಾರೆ. ಮೆಲ್ಲನೆ ಎದ್ದು ಬಟ್ಟೆಗೆ ಅಂಟಿಕೊಂಡ ಹುಲ್ಲು, ಮಣ್ಣು ಗಳನ್ನು ಝಾಡಿಸಿ ರೇಡಿಯೋ ಕಡೆಗೆ ನಡೆಯುತ್ತಾರೆ. ಇಡೀ ಲೋಕದ ಚಿಂತೆ ತಮ್ಮದೆಂಬಂತೆ ಗೂಡಿನ ಸುತ್ತಲೂ ನಿಂತು ಏಕಚಿತ್ತದಿಂದ ಸುದ್ದಿ ಕೇಳುತ್ತಾರೆ. ಮುಂದೆ ಪೇಟೆಧಾರಣೆ. ವಿಕ್ರಯಿಸುವವನಿಂದ ಕೊಳ್ಳುವ ವನ ವರೆಗೆ ಎಲ್ಲರಿಗೂ ಕಿವಿ ನೆಟ್ಟಗಾಗುತ್ತೆ. ವ್ಯಾಪಾರದ ಯೋಚನೆಯೇ ಇಲ್ಲದವನಿಗೂ ಬೇಕು; ವ್ಯಾಪಾರ ಮಾಡಿ ದಿವಾಳಿಯಾಗಿ ಮೂಲೆ ಸೇರಿ ದವನಿಗೂ ಬೇಕು—ಈ ವಾರ್ತೆ. 'ನಾ ಹೇಳಿಲ್ಲವೇ ಅಡಿಕೆ ವಿಚಾರ' ಎಂದು ಒಬ್ಬನೆಂದರೆ—'ಗಾಂಧಿ ಸರಿ ಕಣಯ್ಯ; ಒಂದು ಪೆಟ್ಟು ಎರಡು ತುಂಡು- ಅವನ ಮಾತು' ಎಂದು ಇನ್ನೊಬ್ಬ ಟೀಕೆ ಆರಂಭಿಸುತ್ತಾನೆ. ತಾವು ಕೇಳಿದ ವಾರ್ತೆಯ ಬಗ್ಗೆ ಆಗಲೇ ನೂರು ವಿಮರ್ಶೆಗಳನ್ನು ಮೈದಾನಿನ ವಾತಾವರಣ ದಲ್ಲಿ ಗುಂಯ್‌ಗುಟ್ಟುತ್ತಿರುವಂತೆ ಕೇಳುತಿದ್ದವರು ತಮ್ಮ ತಮ್ಮ ಮನೆಕಡೆ ಹೊರಡಲು ಸಿದ್ಧರಾಗುತ್ತಾರೆ. ಯಾರೋ ಸಂಗೀತಗಾರ ಅತ್ಯಂತ ಕಠಿಣ ಹೊಟ್ಟೆನೋವಿಂದ ನರಳುವವನಂತೆ ಆಲಾಪನೆ ಆರಂಭಿಸುತ್ತಾನೆ ಆ ರೇಡಿ ಯೋದಲ್ಲಿ. ಗೋಧೂಳಿಯನ್ನೂ ಕಾಣದ ನಮ್ಮ ಊರ ಕಾಗೆಗಳು ಮನುಷ್ಯರ ಕಾಲ ಧೂಳಿಯನ್ನೂ ಕಂಡು, ಅದುವರೆಗೆ ಮೈದಾನಿನ ಸುತ್ತಲೂ ನಿಂತ ಮರಗಳಲ್ಲಿ ತಂಗಿನಿಂತುದು ಸಾಕೆಂದು ಹಿಂಡು ಹಿಂಡಾಗಿ ಹಾರಾಡ ಲಾರಂಭಿಸುತ್ತವೆ. ರೇಡಿಯೋ ಸಂಗೀತ; ಊರ ಜನರ ಮಾತುಕತೆಗಳ ಸ್ವರ; ಇವುಗಳನ್ನು ಮೀರಿಸುವ ರಾಗಾಲಾಪನೆ ಆರಂಭಿಸುತ್ತವೆ. ತಮ್ಮ

ಗೂಡುಗಳೆಡೆಗೆ ಹಾರಾಡುವ ಉತ್ಸಾಹದಲ್ಲಿ ತಾವು ತಮಗೆ ಅನ್ನಕೊಡುವ ನಗರದ ಪ್ರಮುಖರ ಮೇಲೆ 'ಗಂಧ' ಎಸೆಯುತ್ತೇವೆ ಎಂಬುದೂ ಅವಕ್ಕೆ ತಿಳಿಯುವುದಿಲ್ಲ!

ಮೈದಾನಿಗೆ ಬರುವ ಮಹಾನುಭಾವರ ಉದಾರತೆಯಿಂದ ತಮ್ಮ ಜೀವನ ಸಾಗಿಸುವ ವ್ಯಾಪಾರಿಗಳೂ ದಿನದ ಲಾಭ ನಷ್ಟಗಳ ಎಣಿಕೆಗೆ ತೊಡಗುತ್ತಾರೆ. ಮೈದಾನಿನ ಎಲ್ಲೆಡೆ ಹರಡಿ ಗುಂಪುಕೂಡಿ ಕುಳಿತವರ ಬಳಿ ನಡೆದು, ಅವರಿಗೊಂದು ಸುತ್ತು ಬಂದು, ತಮ್ಮ ವ್ಯಾಪಾರ ನಡೆಸುವುದು ಈ 'ಬೀಡಿ ಹುಡುಗರ' ಕೆಲಸ. ಹಾಗೆ ಸುತ್ತಾಡುವಾಗ ಮಕ್ಕಳು ಕುಳಿತಿದ್ದ ಕೂಟದೆಡೆ ಬಂದರೆಂದಾದರೆ 'ಚಾಕ್‌ಲೆಟ್'ಗೇ ಪ್ರಾಧಾನ್ಯತೆ. ಅಂತೂ ಅವರೆಷ್ಟು ಕೂಗಾಡಿ ಸುತ್ತಾಡುತ್ತಾರೆ ಎಂಬುದರ ಮೇಲೆ ಹೊಂದಿಕೊಂಡಿದೆ ಅವರ ವ್ಯಾಪಾರ.

"ಬೀಡಿ . . . . ಬೀಡಾ . . . . . ಸಿಗರೇಟ್ . . . ಚಾಕಲೇಟ್ . . . . ಚಾಕಲೇಟ್"

"ಏ ಚಾಕ್‌ಲೇಟ್

ಹುಡುಗ ತಿರುಗಿ ನೋಡಿದ. ಸುಮಾರು ನಲ್ವತ್ತು ವರ್ಷದ ವ್ಯಕ್ತಿ. ಚಿಂತೆಯಿಂದ ಮುಖ ಬಾಡಿದೆ. ದೇಹ ಪುಷ್ಟವಾಗಿದ್ದರೂ ಮುಖದ ದಾರಿ ಹಿಡಿದಿದೆ ಅದು. ಒಂದು ದೋತಿ ಉಟ್ಟಿದ್ದಾರೆ; ಮೇಲೆ ಸಿಲ್ಕ್ ಜುಬ್ಬ. ಹೆಗಲ ಮೇಲಕ್ಕೆ ರೇಶ್ಮೆ ಶಾಲು. ದೋತಿಯಲ್ಲಿ ಸಿಕ್ಕಿಕೊಂಡಿದ್ದ ಹುಲ್ಲಿನ ಚುಂಗನ್ನು ಕೀಳುತ್ತಿದ್ದಂತೆ ಹುಡುಗನನ್ನು ಕರೆದರು. ಅವರ ಬಳಿಯಲ್ಲೇ ಸುಮಾರು ಎಂಟು ವರ್ಷದ ಹೆಣ್ಣು ಮಗು ನಿಂತಿತ್ತು. ನೀಲಿಯ ಬಣ್ಣದ ಕುಡತ. ಧರ್ಮಾವರ ಸೀರೆ ಸೆರಗಿನ ಲಂಗ. ಕೊರಳು ತುಂಬ ಬಂಗಾರದ ಹಾರಗಳು. ಕೈಗೆರಡೆರಡು ಬಂಗಾರದ ಬಳೆಗಳು ಬೇರೆ. ಚಂದ್ರನಂತಹ ಮುಖ; ಅದೇ ಮುಖರಾಗ. ಮಗು ತನ್ನ ಬೊಗಸೆ ಕಣ್ಣುಗಳಿಂದ ಹುಡುಗನೆಡೆಗೇ ನೋಡುತ್ತಿತ್ತು. ಮಗುವಿನ ಕಡೆಗೇ ನೋಡುತ್ತ ಹುಡುಗ ಅವರೆಡೆ ನಡೆದು ಬಂದ.

"ಚಾಕಲೇಟ್ ಕೊಡು . . . . ಚೆನ್ನಾಗಿದೆ ತಾನೆ?"

"ಹ್ಞೂ! ಎಷ್ಟು ಕೊಡಲಿ"

"ಒಂದಾಣೆಗೆ . . . . ? ಯಾವುದು ಬೇಕು ಮಗು?"

ಹುಡುಗ ಚಾಕಲೇಟ್ ಜಾಡಿಯ ಮುಚ್ಚಳ ತೆಗೆದು, ಬೆಳ್ಳಿಯ ಕಾಗದದಲ್ಲಿ ಸುತ್ತಲ್ಪಟ್ಟ ನಾಲ್ಕು ಚಾಕಲೇಟ್ ಎತ್ತಿದ—ಅದನ್ನೇ ನೋಡು ತ್ತಲಿದ್ದ ಮಗುವಿನ ಕೈಗೆ ಕೊಟ್ಟ. ತನ್ನ ಜುಬ್ಬದ ಜೇಬಿನಿಂದ ಪರ್ಸ್ ತೆಗೆದು, ಅದರಿಂದೊಂದಾಣೆ ಎತ್ತಿ ರಾಯರು ಹುಡುಗನ ಕೈಗಿತ್ತರು.

"ಬೇರೇನು ಕೊಡಲಿ . . . . ಬೀಡಾ . . . ."

"ಏನೂ ಬೇಡ . . . ."

ಹುಡುಗ ಎಡಗೈಲಿದ್ದ ಗಾಜಿನ ಮುಚ್ಚಳವನ್ನು ಚಾಕಲೇಟ್ ಜಾಡಿಗೆ ಮುಚ್ಚಿದ. ಒಂದಾಣೆಯನ್ನು ಆ ಜಾಡಿಗಳ ಮರೆಯಲ್ಲಿದ್ದ ಸಿಗರೇಟ್ ಡಬ್ಬಿಯೊಂದರಲ್ಲಿ ಇಳುಹಿದ. ಮಗು ಇನ್ನೂ ಹುಡುಗನೆಡೆಗೇ ನೋಡು ತ್ತಿತ್ತು. ಅದರ ದೃಷ್ಟಿ ಆ ತೂಗಾಡುವ ಅಂಗಡಿಯಿಂದ ಕದಲಲಿಲ್ಲ.

"ಹ್ಞೂ . . . . ನಡೆ ಮಮ್ಲು . . . . ಇನ್ನೇನು . . . . ಸಾಲದೆ? ಹಾಗೆಲ್ಲ ತಿನ್ನಬಾರದು . . . . ಹೊಟ್ಟೆಗೆ ಹಾಳು . . ." ರಾಯರು ಮಗು ವಿನ ಕೈಹಿಡಿದು ಒಂದು ಹಜ್ಜೆ ಮುಂದಿಟ್ಟರು. ಆದರೆ ಮಗು ಅಲುಗಲಿಲ್ಲ.

"ಅಪ್ಪಾ . . . ." ಇನ್ನೂ ಏನೋ ಬೇಕು . . . . ಎಂಬಂತೆ ಮಗು ರಾಯರೆಡೆ ನೋಡಿತು.

"ಇನ್ನೇನು . . . ." ಎಂದರು ರಾಯರು—ಸ್ವಲ್ಪ ಗಟ್ಟಿಯಾಗಿಯೇ.

ಚಾಕಲೇಟ್ ಜಾಡಿಯ ಕಡೆಗೆ ಮಗು ಕೈ ತೋರಿಸಿ, ಅಪ್ಪನ ಮುಖ ವನ್ನೊಮ್ಮೆ ನೋಡಿತು. ತನ್ನ ದೃಷ್ಟಿಯನ್ನು ಹುಡುಗನ ಕಡೆಗೆ ಸರಿಸಿತು.

"ಆಗಲೇ ಕೊಟ್ಟಾಯಿತು . . . . ಸಾಲದೇನು? ಸಾಕು . . . ನಾಳೆ ಬೇರೆ ತರುತ್ತೇನೆ"

"ಅಲ್ಲ . . . . ಅದು . . . ."

"ಪೆಪ್ಪರ್‌ಮಿಂಟ್ ಬೇಕೆ?"

"ಅಲ್ಲ . . . . ಆ ಉಂಗುರ . . ." ಎಂದು ಚಾಕಲೇಟ್ ಜಾಡಿಯ ಮುಚ್ಚಳಕ್ಕೆ ಪೋಣಿಸಿದ್ದ ಕೆಂಪುಕಲ್ಲಿನ ಉಂಗುರದೆಡೆ ಮಗು ಕೈತೋರಿಸಿತು.

"ಇಸ್ಸಿ . . . . ಅದೆಲ್ಲ ಹೊಲಸು . . . . ನಾ ಬಂಗಾರದ ಉಂಗುರ ತಂದು ಕೊಡುತ್ತೇನೆ. ಅದು ತಾಮ್ರದ್ದು . . . . ನಾವೆಲ್ಲ ಹಾಕಿಕೊಳ್ಳ ಬಾರದು"

"ಊಹ್ಞು . . . . ನನಗೆ ಅದೇ ಬೇಕು"

"ಹಟ ಮಾಡಿದರೆ ಹೊಡೆಯುತ್ತೇನೆ ನೋಡು. ನಾಳೆ ತರುತ್ತೇನೆ ಎಂದರೆ ಕೇಳಬೇಕು"

ಮಗು ಮುಂದೆ ಮಾತನ್ನಾಡಲಿಲ್ಲ. ತನ್ನೆರಡು ಕೈಗಳಿಂದಲೂ ಕಣ್ಣುಜ್ಜಿಕೊಳ್ಳಲು ಆರಂಭಿಸಿತು. ಅಳುವುದು ಮಕ್ಕಳ ಬ್ರಹ್ಮಾಸ್ತ್ರ ಎಂತ ತಿಳಿದಿದ್ದ ಆ ಹುಡುಗ—ಉಂಗುರವನ್ನು ಎತ್ತಿದ. ತಾಮ್ರದ ಉಂಗುರ ವೇನೋ ನಿಜ ಅದರ ಕಡಲೆಗಾತ್ರದ ಕೆಂಪುಕಲ್ಲು ಸಂಜೆಯ ಬಿಸಿಲಿಗೆ ಶುಭ್ರವಾಗಿ ಸುಂದರವಾಗಿ ಮಿಂಚುತ್ತಿತ್ತು. ತನ್ನ ಅಂಗಿಯ ತುದಿಯಿಂದ ಉಂಗುರವನ್ನು ಒರಸಿ ಹುಡುಗ ಮಗುವಿನ ಕೈಯಲ್ಲಿಟ್ಟ.

"ಬೇಡ, ಅಂದ್ರೆ ಕೇಳಬೇಕು. ಮನೆಗೆ ನಡೆ . . . ."

"ಮಗು ತಾನೆ ರಾಯರೆ? ಏನೋ ಆಟವಾಡಲೆಂದು . . . ."

"ಆಟವಂತೆ . . . . ಆಟ . . . . ಬಡವರ ಮನೆಯಲ್ಲಿ ಹುಟ್ಟಿದ್ದರೆ ಮನೆಗೆಲಸ ಮಾಡುವ ಪ್ರಾಯವಾಯಿತು . . . ."

"ಕ್ಷಮಿಸಿ ರಾಯರೆ . . . . . ಇಂದು ಎತ್ತಿಕೊಂಡು ನಾಳೆ ಒಗೆಯುತ್ತವೆ . . . . ಅವಕ್ಕೇನು ಗೊತ್ತು . . . ."

"ಎಷ್ಟಪ್ಪ ಅದಕ್ಕೆ . . . ."

"ಏನೂ ಬೇಡ ರಾಯರೆ . . . ."

"ಪಾಪ . . . . ನಿನಗೇಕೆ ನಷ್ಟ . . . . ತಗೊ . . . . ಒಂದಾಣೆ"

"ಇಲ್ಲ ರಾಯರೆ . . . . . . ನನಗೂ ಅದೆಲ್ಲೋ ದಾರಿಯಲ್ಲಿ ದೊರೆಯಿತು" ಹುಡುಗ ಕೈಜೋಡಿಸಿ ಬಿನ್ನವಿಸಿದ.

ರಾಯರು ಮಗುವನ್ನೆಳೆದುಕೊಂಡು ನಡೆದರು. ಕೃತಜ್ಞತೆಯಿಂದ ಉಂಗುರವನ್ನೊಮ್ಮೆ ಹುಡುಗನನ್ನೊಮ್ಮೆ ನೋಡುತ್ತ ಮಗು ತಂದೆಯನ್ನು ಹಿಂಬಾಲಿಸಿತು. ತನ್ನ ಸುತ್ತಾಟವನ್ನೂ ಮರೆತು ಹುಡುಗ ಆ ಮಗುವಿನೆಡೆಗೇ ನೋಡುತ್ತ ನಿಂತಿದ್ದ. ಹೊರಲಾರದಷ್ಟು ಬಂಗಾರದ ಹೊರೆ ಹೊತ್ತರೂ ಆ ನಿಷ್ಕಲ್ಮಶ ಹೃದಯಕ್ಕೆ ತಾಮ್ರವೂ ಬಂಗಾರವೂ ಒಂದೇ. ಎಷ್ಟ ವಿಶಾಲ ಹಸುಳೆಯ ದೃಷ್ಟಿ! ಬಡವ-ಧನಿಕ, ಮೇಲು-ಕೀಳು, ಬಂಗಾರ-ತಾಮ್ರ ಎಂಬ ಅಂತರದ ದೃಷ್ಟಿ ಮೂಡಿಲ್ಲ. ಈ ತಿಳಿಮನದಲ್ಲಿ ಎಂತಹ ಬದಲಾವಣೆಯಾಗುತ್ತದೆ ಮುಂದೆ? ಎಂಥದ್ದೆಲ್ಲ ಸೇರಿಕೊಂಡು ಇಡೀ ಲೋಕವನ್ನು ಹಾಳುಮಾಡುತ್ತದೆ. ನೀನು ಕೀಳು-ತಾನು ಮೇಲು ಎಂಬ

ಅದರ ತಂದೆಗೂ ಅದಕ್ಕೂ ಎಷ್ಟು ಅಂತರ . . .ಎಂದು ಯೋಚಿಸುತ್ತಿದ್ದಂತೆ ರಾಯರು ಮೈದಾನಿನ ಪಕ್ಕದ ಮಾರ್ಗಕ್ಕೆ ತಲಪಿದರು. ಅಲ್ಲೇ ನಿಂತಿದ್ದ ಕಾರನ್ನು ಆ ಮಗುವಿನೊಂದಿಗೆ ಅವರೂ ಏರಿದರು.

. ದಿನದ ಒಂದು ತುತ್ತು ಅನ್ನಕ್ಕಾಗಿ ತಾನು ಬಿಸಿಲೆನ್ನದೆ ಮಳೆಯೆನ್ನದೆ ನೆಲೆಯಿಲ್ಲದೆ ಸುತ್ತಾಡಿ ದುಡಿಯಬೇಕು. ಇಷ್ಟು ದುಡಿದರೂ ದಿನದ ಅನ್ನ ಖಚಿತವೆಂಬ ಧೈರ್ಯವಿಲ್ಲ; ಅದನ್ನು ಪಡೆವ ಭರವಸೆಯಿಲ್ಲ. ದುಡಿಮೆ ತನ್ನ ಕರ್ತವ್ಯವಾಗಿದೆ; ಫಲ–ಅದನ್ನು ಕೊಡುವವನು . . . . ದೇವರು . . . . . . ಅಲ್ಲ . . . . . ದೇವರು ಹೇಗೆ ಕೊಡುತ್ತಾನೆ . . . . . ? ಅವನು ಕೊಡುವುದಾದರೆ ನನ್ನ ಸಂಕಟವನ್ನು ಕಂಡು ಮರುಕಗೊಂಡು ಇಷ್ಟು ದುಡಿದರೂ 'ಈತನಿಗೆ ಅನ್ನ ಒದಗಲಿಲ್ಲ; ನಾನಾದರೂ ಕೊಡುತ್ತೇನೆ' ಎಂದು ಮುಂದೆ ಬರುತಿದ್ದ. ಆದರೆ ಫಲಕೊಡುವವರು ಜನರು. ನನ್ನಂತಹರೇ? ಅವರಿಗೂ ನಾನು ಆ ದಿನ ಎಷ್ಟು ಸುತ್ತಾಡಿದೆ, ಎಷ್ಟು ಬಾರಿ ಕೂಗಿಕೊಂಡೆ, ಎಷ್ಟು ಹೊತ್ತು ಬಿಸಿಲಲ್ಲಿ ಒಣಗಿದೆ ಎಂಬುದು ಹೇಗೆ ತಿಳಿಯಬೇಕು? ನನ್ನ ದುಡಿಮೆಯ ಕಷ್ಟ ತಿಳಿದವರು . . . . ? ನಿಜ . . . . ನನ್ನಂತೆ ಅಂಗಡಿಯನ್ನು ಹೊತ್ತುಕೊಂಡು ತಿರುಗಾಡುವವರು ಮಾತ್ರ. ಅವರ ಸ್ಥಿತಿಯೂ ನನ್ನದೇ, ಅಳುವವನಿಗೆ ಅಳುವವನು ಏನು ಸಮಾಧಾನ ಹೇಳಬಲ್ಲ?

ಆದರೆ . . . . ಆ ಮಗು . . . . ? ತನಗಿಂತ ನಾಲ್ಕೋ ಐದೋ ವರ್ಷಕ್ಕೆ ಕಿರಿಯದಿರಬಹುದು. ಕಮಲದಂತಹ ಮುಖ, ತಾವರೆ ದಂಟಿನಂತಹ ಕತ್ತು. ಆ ಕತ್ತು ಹೊರಲಾರದಷ್ಟು ಹಾರಗಳು, ಸುಖವಾಗಿ ಉಂಡು ತಿಂದು ಮೆರೆಯಲು ಬೇಕಾದ ಸಂಪತ್ತು. ಸುತ್ತಾಡಲು ಕಾರು ಬೇರೆ . . . . . ! ಜತೆಗೆ . . . . . ಕೇಳಿದ್ದನ್ನು ಕೊಡುವ ತಂದೆ. ಸದಾ ಮುದ್ದಾಡಿಸುವ . . . ತಾಯಿ! ಮಗುವಿನ ಭಾಗ್ಯಕ್ಕೆ ಎಣೆಯಿದೆಯೇ? ತಂಗಿ ರೂಬಿಯಂತಿದೆ ಆ ಮಗು . . . . ಹುಡುಗನ ಕಣ್ಣಲ್ಲಿ ನೀರು ತುಂಬಿತು. ಯೋಚನೆಯ ಅಲೆಗಳು ಒಂದಾಗಿ ಧಾವಿಸಿ ಬಂದು ಅವನ ಎದೆಯ ಮೇಲೆ ಅಪ್ಪಳಿಸುತ್ತಿದ್ದುವು. ಹಳೆಯ ಚಿತ್ರಗಳು ಮಿಂಚಿನ ವೇಗದಲ್ಲಿ ಅವನ ಮನದ ಕಣ್ಣ ಮುಂದೆ ಸುಳಿದು ಮಾಯವಾಗಿ ಮಂಗನಾಟವಾಡುತ್ತಿದ್ದವು. ಈ ಗೊಂದಲದಲ್ಲಿ ದಿಕ್ಕುಕಾಣದಾಗಿ ನಿಂತುಬಿಟ್ಟ. ಕಣ್ಣಿಂದ ಹರಿವ ನೀರು ನೋಟವನ್ನು ಮಸಕುಮಾಡಿತು. ಆ ತಂದೆ . . . . ಮಗು . . . . ಕುಳಿತ

ಕಾರು ಹೊರಟು ಹೋದುದೂ ಅವನಿಗೆ ತಿಳಿಯದು. ಸಂಜೆಯ ಸೂರ್ಯ ಮೈದಾನಿನ ಸುತ್ತಲಮರಗಳ ಮರೆಯಿಂದ ಇಳಿದು ಮನೆಗಳ ಹಿಂಗಡೆಗೆ ನಿಂತುದೂ ಅರಿವಾಗಲಿಲ್ಲ. ಕೆಂಪು ಹಳದಿ ಬಣ್ಣಗಳನ್ನು ಪಡುವಣ ದಿಕ್ಕು ಪಡೆದಿತ್ತು. ಮೈದಾನಿನಲ್ಲಿದ್ದ ಜನರಲ್ಲಿ ಮುಕ್ಕಾಲುಪಾಲು ಮಂದಿ ಮನೆಯ ಕಡೆ ನಡೆದಿದ್ದರು.

ಯೋಚನೆಗಳನ್ನು ಬದಿಗೆ ಸರಿಸಿ, ಕಣ್ಣೊರಸಿಕೊಂಡು ಹುಡುಗ ಜಾಗೃತನಾದ. ಸುತ್ತಲೂ ಒಮ್ಮೆ ದೃಷ್ಟಿ ಹರಿಯಿರಿಸಿದ. ಮೈದಾನು ಹೆಚ್ಚು ಕಡಿಮೆ ಬರಿದಾಗಿತ್ತು. ರೇಡಿಯೋ ಯಾವುದೋ ಹಾಡನ್ನು ಹಾಡುತ್ತಿದೆ. ಬೀದಿಯ ದೀಪಗಳು ಮಿನುಗುತ್ತಿವೆ.

ತನ್ನ ಕರ್ತವ್ಯ ಮರೆತ ಬಗ್ಗೆ ಅವನಿಗೇ ನಾಚುಗೆಯಾಯಿತು. ಇಂತಹ ಯೋಚನೆ ಎಷ್ಟು ಬಾರಿ ಬಂದಿಲ್ಲ ಅವನಿಗೆ? ಎಷ್ಟು ಬಾರಿ ಆ ರೀತಿ ವಿಚಾರ ಸಂಕಲೆಯಲ್ಲಿ ಸಿಲುಕಿ ಪರಿತಪಿಸಿಲ್ಲ? ಆದರೆ, ಇಂದೇಕೋ ವಿಚಾರಧಾರೆ ತೀಕ್ಷ್ಣವಾಗಿತ್ತು. ಆ ಮಗುವಿನ ಮುಖ, ನಡೆ, ನುಡಿ, ಮನ ಅವನ ಹೃದಯ ಸೂರೆಗೊಂಡಿತ್ತು. ಬಡತನ-ಸಿರಿತನಗಳ ಬಗೆಗೆ ಹೊಸ ವಿಚಾರ ಮಿಂಚಿದೆ. ಕೆಸರಿನಲ್ಲಿ ಕೆಸರೇ ಅಲ್ಲ-ಕಮಲವೂ ಹುಟ್ಟುತ್ತೆ; ಹಾಲಿನಲ್ಲೂ ಹುಳು ಇರಬಹುದು ಎಂಬ ಭಾವ ಅವನಲ್ಲಿ ಮೂಡಿತು. ಇದೇ ಪ್ರಾಯದಲ್ಲಿ ತಾನು ಅದೆಷ್ಟು ದುಡಿಯುಲಿಲ್ಲ! ಮನೆಯವರು ಹೇಳಿದ ಕೆಲಸಗಳನ್ನೆಲ್ಲ ಮುಗಿಸಿ ಶಾಲೆಗೆ ತೆರಳಿದ್ದ. ಮಾಸ್ತರರ ಕೈಯ ನಾಗಬೆತ್ತ ಅವನ ಕೈಮೇಲೆ ಅನೇಕ ಬಾರಿ ಕುಣಿದಿದೆ. ಆದೇ-ಈ ಮಗುವನ್ನು "ಕೆಳಗಿಟ್ಟರೆ ಬೆಕ್ಕು ಒಯ್ಯಬಹುದು, ಮೇಲಿಟ್ಟರೆ ಕಾಗೆ ಕಡಿಯಬಹುದು" ಎಂಬ ಭಾವದಿಂದ ಅದರ ತಂದೆ ತಾಯಿ ಸಲಹುತ್ತಿದ್ದಾರೆ. ಬಡವರ ಮಗು ಆರು ವರ್ಷದಲ್ಲಿ ಹದಿನಾರರ ಹೊಣೆ ಹೊರುತ್ತದೆ. ಧನಿಕರ ಮಗುವಿಗೆ ಹದಿನಾರಾದರೂ ಅದು ಏನೂ ಅರಿಯದ ಹಸುಳೆಯಾಗೇ ಇರುತ್ತದೆ. ಆದರೂ, ಅದರ 'ಜಾಣ್ಮೆ'ಯನ್ನು ಕಂಡು ನಲಿವವರೇ ಎಲ್ಲ. ಅದಕ್ಕೂ ಮೇಲಾಗಿ ಆ ಮಗುವಿನ ಮುಖ ಅವನ ತಂಗಿ ರೂಬಿಯ ಚಿತ್ರ ಅವನ ಮುಂದೆ ನಿಲ್ಲಿಸಿತು. ರೂಬಿಯ ಹಿಂದೆ ನಿಂತುದು ಅವನ ತಾಯಿಯ ಚಿತ್ರ.

"ಹೌದು . . . . ತಾಯಿ . . . ."

ತಾಯಿಯ ಚಿಂತೆ ಹೊಸದಲ್ಲ; ದಿನನಿತ್ಯ ಎಂಬಂತೆ ಅವನ ಮನದಲ್ಲಿ

ಮೂಡಿ ಮಾಯವಾಗಿದೆ. ಪ್ರತಿಬಾರಿಯೂ ಅವಳನ್ನು ಮರೆತು ಬಿಡುವ ಪ್ರತಿಜ್ಞೆಮಾಡಿದ್ದಾನೆ; ಮರೆಯಲು ಯತ್ನಿಸಿದ್ದಾನೆ; ಸೋತಿದ್ದಾನೆ. ಲೆಕ್ಕವಿಲ್ಲದಷ್ಟು ಬಾರಿ ತಾಯಿಯನ್ನು ನೆನೆನೆನೆದು ಕಣ್ಣೀರು ಹರಿಯಿಸಿದ್ದಾನೆ; ನಿದ್ದೆಯಿಲ್ಲದೆ ಚಾಪೆಯ ಮೇಲೆ ಹೊರಳಿದ್ದಾನೆ. ಅತ್ತು ಅತ್ತು ಅವನ ಕಣ್ಣುಗಳು ಊದಿಕೊಂಡಿವೆ; ಈಗ ಕಣ್ಣೀರೇ ಇಲ್ಲವಾಗಿದೆ. ಅಳುತ್ತ ನಿದ್ದೆ ಹೋದ ದಿನಗಳ ನೆನಪಿಲ್ಲ ಅವನಿಗೆ. ಆದರೆ-ಆ ಅಳು ಈಗ ನಗುವಾಗಿದೆ ಅವನ ತಾಯಿಯನ್ನು ಮರೆಯಲೆತ್ನಿಸಿದಷ್ಟು ಅವಳ ಚಿತ್ರ ಹತ್ತಿರ ಸರಿದು ಅವನಿಗೆ ಹರುಷವಾಗಿದೆ. ಕೈಗೆ ಸಿಗದಾಗಿ ನಿಂತಿದ್ದಾಳೆ ಆಕೆ ಎಂತಲೇ 'ತಾಯಿ' ಪದದ ಮೇಲೆ ಜಿಗುಪ್ಸೆ ಉಂಟಾಗಿದೆ. ಮಕ್ಕಳ ಮೇಲೆ ತಾಯಿಗೆ ಮಮತೆ—ಎಂದಾಗ ಒಮ್ಮೊಮ್ಮೆ ನಗು ಬರುತ್ತೆ. ಇಂದಲ್ಲ ನಾಳೆ ಈ ಭಾವನೆ ಬದಲಾಗಬಹುದು ಎಂದುಕೊಳ್ಳುತ್ತಾನೆ.

ಮಗು . . . . ತನ್ನ ಪ್ರಣಯ ಜೀವನದ ಫಲ—ತಾನು ತಾಯಿಯಾದ ಸಂಕೇತ. ತನಗೆ ಬೇಕು ಎಂದು ಹೆಮ್ಮೆಪಡುವ ತಾಯಿ; ಆ ಮಗುವನ್ನು ಹಾಗೆ ನಲಿಸಬೇಕು, ಹೀಗೆ ಸಲಹಬೇಕು ಎಂದು ಕನಸು ಕಾಣುವ ಹೆಣ್ಣು—ತಾನು ತಾಯಿಯಾಗಿ ಆ ಮಗುವನ್ನು ಮುದ್ದಿಸಿ-ಲಾಲಿಸಿ-ಪಾಲಿಸಿದ ಬಳಿಕ ಎಲ್ಲ ಮರೆಯುತ್ತಾಳೆ. ಮಗುವಿನ ನೆನಪೂ ಆಕೆಗೆ ಅಳಿಯುತ್ತೆ-ಎಂಬುದು ಅವನ ಸ್ವಾನುಭವ ಸಿದ್ಧಾಂತ. ಹೀಗೆ ಮಗುವನ್ನು ಮರೆತ ತಾಯಿ ದೂರ ನಡೆದರೆ, ತನ್ನ ಕಣ್ಣೆದಿರು ಮಗು ಇಲ್ಲದಾದಾಗ—ಆದೇ ಮಗುವಿಗಾಗಿ ಹಂಬಲಿಸುವುದನ್ನು ಆತ ಕಂಡಿದ್ದಾನೆ. ಅಪರೂಪವಾದಷ್ಟು ಅಭಿಮಾನ ಅಧಿಕ. ಆದರೆ, ಹಾಲು ಚೆಲ್ಲಿದ ಬಳಿಕ ಅದೇ ಹಾಲಿಗಾಗಿ ಕಾತರಿಸುವುದು ಮೌಢ್ಯವಲ್ಲವೇನು?

ಎಂತಲೇ ದಿನ ಬೆಳಗಾದರೆ ದುಡಿತದ ಯೋಚನೆ; ಜೀವನದ ಚಿಂತೆ ಅವನಿಗೆ ಮುಖ್ಯವಾಗಿತ್ತು. ತನ್ನ ಕೊರಳಿಗೆ ತೂಗಾಡಿಕೊಂಡು ತನ್ನ ಜೀವನ ನಡೆಸಲು ಸಹಕಾರಿಯಾಗುವ ಈ ಹಲಿಗೆಯ ಅಂಗಡಿ ಅವನ ತಾಯಿ, ತಂದೆ, ಬಂಧುಗಳು. ಅವನನ್ನು ಕೂಗಿ ಕರೆದು, ಬೀಡಿ ಕೊಡು-ಸಿಗರೇಟು ಕೊಡು-ಚಾಕಲೇಟ್ ಕೊಡು-ಎನ್ನುವವರೇ ಅವನ ಗೆಳೆಯರು. ಅದಕ್ಕಿಂತ ಹೆಚ್ಚಿಗೆ ಆತ ಈ ಪ್ರಪಂಚದಲ್ಲಿ ಕಂಡಿಲ್ಲ; ಕಾಣಲೂ ಬಯಸಿಲ್ಲ.

ಹುಡುಗ ಜಿಗುಪ್ಸೆಯಿಂದ-ಯಂತ್ರದಂತೆ ಇನ್ನೊಮ್ಮೆ ರೇಡಿಯೋ

ಗೂಡಿನ ಸುತ್ತ ಸುಳಿದು 'ಬೀಡಾ–ಸಿಗರೇಟ್' ಎಂದು ಕೂಗಿದ. ಗಿರಾಕಿಗಳೇ ಇಲ್ಲ. ಮನೆಯ ಕಡೆ ನಡೆಯಲು ಅಣಿಮಾಡಿದ. ದುಡಿಮೆ ಎಷ್ಟೆಂದು ಎಣಿಕೆ ಹಾಕಿದ.

ಒಂದು ರೂಪಾಯಿ ಏಳಾಣೆ ಎಂಟು ಕಾಸು.

ಲಾಭ–ಸೇರು ಅಕ್ಕಿ, ಉಪ್ಪು, ಹುಳಿ, ಮೆಣಸು . . . ತರಬಲ್ಲದು.

---

# ಎ ರ ಡು

"ನಿನಗೆ ನಾಚಿಗೆಯಾಗುವುದಿಲ್ಲವೇ?"

" . . . . . . . "

"ಕುಲಕ್ಕೇ ಅಪಕೀರ್ತಿ ತಂದೆ. ಈ ದಾರಿ ತುಳಿಯುತ್ತೀ ಎಂತ ನಾ ತಿಳಿದಿರಲಿಲ್ಲ."

" . . . . . . . . . "

"ನಾಲಿಗೆ ಇಳಿದು ಹೋಯಿತೇನು? ಮಾತನಾಡು ಇಷ್ಟು ಹಾರಾಟ ಹಾರುವವಳಿಗೆ ಮಾತು ಹೇಳಿಕೊಡಬೇಕೆ?"

"ನನ್ನ ಇಚ್ಛೆ"

"ಏನು?"

"ನನಗೆ ಬೇಕಾಯಿತು . . . "

"ಬೇಕಾಯಿತೆ? ಮತ್ತೇನು ಬೇಡ ನಿನಗೆ? ಇಂದು ಒಬ್ಬ—ನಾಳೆ ಇನ್ನು ಹತ್ತಾರು ಮಂದಿ ಬೇಕಾಗಬಹುದು"

"ಅವನೇ ನನ್ನವನು."

"ಮುಚ್ಚು ಬಾಯಿ. ಇನ್ನೊಮ್ಮೆ ಆ ಮಾತು ಆಡಬೇಡ . . . . . . ವ್ಯಭಿಚಾರಿ . . . . "

"ಇರಬಹುದು . . . . ಅದೇ ನನಗೆ ಹಿತ"

"ಹಿತವಂತೆ ಹಿತ! ಬೀದಿಯಲ್ಲಿ ಬಿದ್ದ ಹೊಲಸು ತಿನ್ನಬಾರದಿತ್ತೇ? ಅದೂ ಹಿತವಾಗೇ ಇತ್ತು. ವಿಷವನ್ನಾದರೂ ನೀ ಸೇವಿಸಿದ್ದರೆ . . . . "

"ನಾನೇಕೆ ಹಾಗೆ ಮಾಡಲಿ?"

"ನಿಜ. ನಿನಗೇನು ದಾಡಿ? ನೀನು ನಿನ್ನ ಸ್ವರ್ಗದ ದಾರಿ ಕಂಡು ಕೊಂಡಾಯಿತು. ನಾನಿನ್ನು ನಿನ್ನಿಂದಾಗಿ ವಿಷಪಾನ ಮಾಡಬೇಕಾಗಿದೆ. . . . . . . ಏನು ಅಹಂಕಾರ . . . . ಕಾಮುಕ್ಕೆ ಕಣ್ಣಿಲ್ಲ ಎಂಬುದು ನಿಜ. ಈ ಮಟ್ಟಕ್ಕೆ ನೀ ಇಳಿಯುತ್ತಿ ಎಂತ ತಿಳಿದಿದ್ದರೆ . . . ."

"ಏನು . . . ."

"ಹುಟ್ಟಿದೊಡನೆಯೋ ಕತ್ತು ಹಿಸುಕಿ ಹಾಕುತಿದ್ದೆ."

"ಹಾಗೆ ಮಾಡಿದ್ದರೆ ಯಾವ ಸಂಕಟವೂ ಇರಲಿಲ್ಲ. ಎಲ್ಲರಿಗೂ ಸುಖವಾಗುತಿತ್ತು."

"ಸಾಕು ಮಾಡು ನಿನ್ನ ಕೊಂಕು. ಸಂಕಟವಂತೆ . . . . ಸಂಕಟ. ನನ್ನ ಮಾನ ಕಳೆದು, ವಂಶದ ಹೆಸರನ್ನೇ ಹಾಳುಮಾಡಿದೆ. ನನ್ನನ್ನು ನರ ಕಕ್ಕೆ ದೂಡಿದೆ. ಸಂಕಟವಂತೆ . . . ."

ರಾಮಯ್ಯನ ಕ್ರೋಧ ಮೇರೆ ಮೀರಿತು. ಅವರು ಕಿಡಿಕಿಡಿಯಾ ದರು; ಸರ್ವಾಂಗವೂ ಕುದಿದು ನಡುಗುತ್ತಿತ್ತು. ತನ್ನ ಪ್ರೀತಿಯ ಮಗಳು; ತಾನು ತಾಯಿಯಿಲ್ಲದ ತಬ್ಬಲಿ ಎಂದುಕೊಂಡು ಮಮತೆಯಿಂದ ಸಲಹಿದ ಹುಡುಗಿ, ಈ ದಾರಿ ಹಿಡಿಯುತ್ತಾಳೆ ಎಂದವರು ತಿಳಿದಿರಲಿಲ್ಲ. ಊರಲ್ಲಿ ಯಾರ ಬಗ್ಗೆ ಯಾವ ಮಾತು ಬಂದರೂ ನನ್ನ ಬಾಗಿ ಹಾಗಲ್ಲ—ಅವಳ ಗುಣವೇ ಬೇರೆ ಎಂದು ಮಾತಿಗೆ ಮಂಗಳ ಹಾಡುತ್ತಿದ್ದರು. ಗಂಡು ಮಗನೇ ನನಗೆ ಈ ಬಾಗಿ; ಅವಳೇ ನಮ್ಮ ವಂಶ ಬೆಳೆಸುವವಳು ಎನ್ನುತ್ತಿದ್ದರು. ಅವರಿವರ ಜತೆಗೂಡಿ, ಊರ ಹೆಣ್ಣುಗಳ ಕತೆಗಳಿಗೆಲ್ಲ ತಾನೂ ಬಣ್ಣ ಬಳಿಯುತ್ತಿದ್ದರು. ಇದುವರೆಗೆ ಅವರು ಊರ ನೂರು ಸಂಸಾರ ಗಳ ಬಗ್ಗೆ, ಹೆಣ್ಣುಮಕ್ಕಳ ಬಗ್ಗೆ ಆಡಿದ ಮಾತುಗಳೆಲ್ಲ ಹಿಂತಿರುಗಿ ಧಾಳಿ ಇಟ್ಟಂತಾಯಿತು ಈಗ. 'ಆ ಹೆಣ್ಣು? ನಿಜ . . . . ಕುದುರೆಯಂತೆ ಬೆಳೆ ದಿದೆ' ಎಂದ ಇವರ ಮಗಳಿಗೆ ವರ ದೊರೆತುದೂ ತಡವಾಗೇ! 'ಮದುವೆ ಯಾಗಿ ಇನ್ನೂ ವರ್ಷವಾಗಿಲ್ಲ ಗಂಡನನ್ನೇ ತಿಂದಳು ಆ ಹುಡುಗಿ' ಎಂದಿದ್ದ ಮಾತಿಗೆ ಉತ್ತರವೂ ದೊರೆಯಿತು. ಬಾಗಿ ವಿಧವೆಯಾಗಿ ಹಿಂತಿರುಗಿ ಬಂದಿದ್ದಳು.

ಸಿಕ್ಕ ಸಿಕ್ಕ ಜ್ಯೋತಿಷಿಗಳಿಗೆ ಅವರು ಬಾಗಿಯ ಜಾತಕ ತೋರಿ

ಸಿದ್ದರು. ವಿವಿಧ ಗ್ರಹರ ಸ್ಥಾನಮಾನಗಳ ಬಗ್ಗೆ ಚರ್ಚೆ ನಡೆಸಿದ್ದರು. ಆದರೆ, ಯಾರೂ ಬಾಗಿ ವಿಧವೆಯಾಗುತ್ತಾಳೆ ಎಂಬುದನ್ನು ಹೇಳಿಲ್ಲ. ಅವಳಿಗೆ ಕಂಟಕ ಬರಬಹುದು ಎಂದರು; ರಾಮಯ್ಯ ಮೊದಲ ಹೆರಿಗೆ ಬಹಳ ಜಾಗರೂಕತೆಯಿಂದ ಸಾಗಲಿ ಎಂತ ಹತ್ತಾರು ಪತ್ರಗಳನ್ನು ಬರೆದು ಅಳಿಯನನ್ನು ಎಚ್ಚರಿಸಿದ್ದರು. ಆದರೆ ಈಗ? ಕಂಟಕವೇನೂ ಬರಲಿಲ್ಲ ಅವಳಿಗೆ. ಅವಳ ಪತಿಯೇ ಅವಳನ್ನು ಬಿಟ್ಟು ಹೋದ; ಸಮಾಜದ ದೃಷ್ಟಿಯಲ್ಲಿ ಬಾಗಿಯೇ ಕಂಟಕಳಾದಳು. 'ತಂದೆಯನ್ನು ಕಬಳಿಸಿದ ಮಗು' ಎಂಬ ಮಾತು ಕೇಳಿ ಕೇಳಿ ಬಾಗಿ ಬೆಂದು ಹೋದಳು. ಆಕೆಯ ಹಿಂದೆ, ಅವಳಿಗೆ ಕೇಳಿಸದಂತೆ "ಒಂದು ವರ್ಷದಲ್ಲೇ ಗಂಡನನ್ನು ಸಾರಿಸಿಬಿಟ್ಟ ಸೌಭಾಗ್ಯವತಿ" ಎಂಬ ಮಾತುಗಳು ಬೇರೆ. ಮುಳ್ಳಿನ ಹಾಸಿನ ಮೇಲೆ ಮಲಗಿ, ಸಾವಿರ ಕಣೆಗಳ ಕಾಟ ತಡೆಯಲಾರದೆ ನರಳುತಿದ್ದ ಬಾಗಿಯನ್ನು ರಾಮಯ್ಯ ಮನೆಗೆ ಕರೆದುಕೊಂಡು ಬಂದರು. ಒಂಟಿಯಾಗಿ ದಿನ ದೂಡುವ ತನಗೆ ಊರುಗೋಲಾಗಿರಲಿ ಈಕೆ ಎಂದುಕೊಂಡರು. ಈಗ ಅಶನಾರ್ಥದ ಬಗ್ಗೆ ಹೂಡಿದ್ದ ದಾವೆ ಬೇರೆ ಕೋರ್ಟಿನಲ್ಲಿದೆ. ಗಂಡ ಸತ್ತು ಎರಡು ವರ್ಷವೂ ಆಗಿಲ್ಲ. ಅಷ್ಟರೊಳಗೆ . . . . .

ಕೋರ್ಟಿನಲ್ಲಿರುವ ದಾವೆಯ ವಿಚಾರ ಅವರ ಮನದಲ್ಲಿ ಸುಳಿದಾಗಲಂತೂ ತುಂಬಾ ತಬ್ಬಿಬ್ಬಾದರು ರಾಮಯ್ಯ. ದಾವೆ ಹಾಳಾದರೆ ಆಗಲಿ; ಆದರಿಂದ ತನ್ನ ಬಾಳಿಗೂ ಕಲ್ಲು ಬೀಳುತ್ತೆ. ತನ್ನ ಮಾನ ಬೀದಿ ಬೀದಿಗಳಲ್ಲಿ ಕಾಸು ಆರು ಕಾಸಿಗೆ ಹರಾಜಾಗುತ್ತೆ. ತಾನು ತಲೆ ಎತ್ತಿ ತನ್ನ ಹಳ್ಳಿಯಲ್ಲಿ, ತನ್ನ ಸಮಾಜದಲ್ಲಿ ಬದುಕಿ ಉಳಿಯುವುದೇ ಒಂದು ಸತ್ವ ಪರೀಕ್ಷೆಯಾಗುತ್ತೆ ಎಂದೆನಿಸಿತು ಅವರಿಗೆ. ಕ್ರೋಧದಿಂದ, ದುಃಖದಿಂದ ಅವರ ಮೈ ನಡುಗಿತು; ಬೆವರಿತು.

"ಚಂಡಾಲಿ . . . ."

"ಇರಬಹುದು . . . . ನಾನು ಹೆಣ್ಣು . . . . "

"ನೀನು ಪ್ರಾಣಿ ಜಂತು . . . . ನನ್ನ ನಾಶಕ್ಕೆ ಹುಟ್ಟಿದ ದೆವ್ವ"

ರಾಮಯ್ಯನ ಬಾಯಿಯಿಂದ ಮುಂದೆ ಮಾತು ಹೊರಡಲಿಲ್ಲ. ಕೆಟ್ಟ ಮಾತುಗಳು ಅವರಿಗೆ ಹೊಸತು. ಜೀವನದಲ್ಲಿ ಎಂದೂ ಇಂತಹ ಪ್ರಸಂಗ ಅವರಿಗೆ ಬಂದಿರಲಿಲ್ಲ. ಯಾವ ರೀತಿ ತನ್ನ ಮಗಳನ್ನು ನಿಂದಿಸಬೇಕೆಂಬುದೇ

ತೋರದಾಯಿತು. ಕ್ರೋಧದಿಂದ ದುಃಖವೂ ಉಕ್ಕಿ ಕಣ್ಣೀರು ಹರಿಯಿತು. ಮೂಕರಾಗಿ ಕುಳಿತು ಬಿಟ್ಟರು. ಅವರ ಕೈಗಳು ದುಃಖದಿಂದ ಸಂತಪ್ತವಾದ ಅವರ ತಲೆಯನ್ನು ಆದರಿಸಿ ಹಿಡಿದಿದ್ದುವು.

ತಾನು ಅನ್ಯಾಯ ಮಾಡುತ್ತಿದ್ದೇನೆ; ತಂದೆಯ ಮನಸ್ಸಿಗೆ ನೋವನ್ನುಂಟುಮಾಡುತ್ತಿದ್ದೇನೆ—ಎಂಬುದು ಭಾಗೀರಥಿಗೆ ಹೊಳೆಯದಿರಲಿಲ್ಲ. ಆದರೆ . . . . ಈ ಹೆಣ್ಣು ಬಾಳಿನ ಗತಿಯೇ ಹೀಗೇನು? ಪತಿ ಇಹವನ್ನುಳಿದ. ಆ ದುಃಖ, ಅನುಭವಿಸುತ್ತಿರುವ ನನಗಿಂತ ಬೇರೆಯವರಿಗೆ ಹೆಚ್ಚಾಗಿ ತಿಳಿದಿದೆಯೇ? ಆತನ ಹಿಂದೆ ತಾನೂ ಹೋಗಬೇಕೆ? ಬದುಕಿದ್ದರೂ ಸತ್ತವಳಂತೆ ಬಾಳಬೇಕೆ? ಇನ್ನೂ ಇಪ್ಪತ್ತರ ಪ್ರಾಯಕ್ಕೆ ಕಾಲಿರಿಸಿದ್ದಾಳಷ್ಟೆ ಬಾಗಿ. ಅಂದವಾದ ರೂಪ; ಸುಂದರವಾದ ಮೈಕಟ್ಟು; ತುಂಬು ಯೌವ್ವನ. ತನ್ನ ಜೀವನದಲ್ಲಿ ನಾಲ್ಕಾರು ತಿಂಗಳ ಕಾಲ ಗಂಡನ ಜತೆಗೆ ಐಹಿಕ ಸುಖ ಸ್ವರ್ಗ ಅನುಭವಿಸಿದ್ದಾಳಷ್ಟೆ! ಮುಂದೆ ತನ್ನ ಸುಖಾನುಭವದ ರಸಪಾಕವನ್ನು ಹೊತ್ತಳು. ಗರ್ಭಿಣಿಯಾದಳು; ತಾಯಿಯೂ ಆದಳು.

* * * *

ಇದೇ ಮನೆಯ ಚಾವಡಿಯ ಕಂಭಕ್ಕೆ ಒರಗಿಕೊಂಡು, ಹೆರಳು ಹಾಕುವುದನ್ನೂ ಸೀರೆ ರವಕೆ ಬದಲಿಸಿ ಸಿಂಗರಿಸಿಕೊಳ್ಳುವುದನ್ನೂ ಮರೆತು ಆಕೆ ಕಳೆದ ದಿನಗಳೆಷ್ಟೋ? ಯಾವುದೋ ಕಡೆಗೆ ದೃಷ್ಟಿ ಹರಿಯಿಸಿ ಮತ್ತಾವುದೋ ಕಡೆ ಮನಸ್ಸನ್ನು ಓಡಿಸಿದ್ದಾಳೆ. ಮನೆ ಇದಿರಿನ ಮಾವಿನ ಮರ, ಪಕ್ಕದ ಹಲಸಿನ ಮರ, ದೂರದಲ್ಲಿ ನಿಂತು ತನ್ನ ಎಲೆಗಳನ್ನು ಕುಣಿಸಿ, ನಲಿಯುತ್ತಿದ್ದ ಅಶ್ವತ್ಥ ಅವಳಿಗೆ ಸಾವಿರ ಕತೆ ಹೇಳಿವೆ. ಆ ಮರಗಳ ನೆರಳಲ್ಲಿ ಎರಡಾಗಿ ನಾಲ್ಕಾಗಿ ಅತ್ತಿತ್ತ ಓಡಾಡುತ್ತಿದ್ದ ಗಡಸುಗಳನ್ನು ನೋಡಿದ್ದಾಳೆ. ನಾಯಿಗಳು ನಲಿದು ಆಡುವುದನ್ನು; ತಾಯಿ ತನ್ನ ಮರಿಗಳಿಗೆ ಹಾಲೂಡುವುದನ್ನು ಕಂಡಿದ್ದಾಳೆ. ಅವಳ ಹೆರಳು ಹಾಕಿರದ ಕೂದಲು, ಬಾಡಿದ ಮುಖ, ಮಾಸಿದ ಬಟ್ಟೆ, ಚಿಂತೆಯಿಂದ ಬಾಡಿದ ಶರೀರದ ಬಗ್ಗೆ ಯಾರು ಪ್ರಶ್ನಿಸಿದ್ದಾರೆ? ಆ ದಾರಿಯಾಗಿ ಪೇಟೆಯಿಂದ ಮನೆಗೆ; ಮನೆಯಿಂದ ಪೇಟೆಗೆ ಹೋಗುತ್ತಿದ್ದ ತರುಣರನ್ನು ಎವೆಯಿಕ್ಕದೆ, ಬಿಡುಗಣ್ಣಿನಿಂದ ನೋಡಿದ್ದಾಳೆ. ಆ ತರಕಾರಿ ಹೊತ್ತುಕೊಂಡು ಹೋಗುವ ಹೆಣ್ಣುಗಳನ್ನು ತಾನೇ ಕರೆದು ಪರಿಚಯ ಮಾಡಿಕೊಂಡಿದ್ದಾಳೆ. ತನ್ನ ಗೆಳತಿಯ

ರಂತೆ ತಾನೂ ನಲಿಯಬೇಕು. ತನ್ನ ಗಂಡನೊಂದಿಗೆ ಸುಖಪಡಬೇಕು. ಐಹಿಕ ಸುಖದ ಶಿಖರವನ್ನೇರಿ ನರ್ತಿಸಬೇಕೆಂದು ಕನಸು ಕಂಡಿದ್ದಾಳೆ. ಇದೇ ಚಾವಡಿ; ಇದೇ ಕಂಬ; ಇದೇ ಮನೆಯ ಮುಂದಿನ ನಲಿಯುತ್ತಿರುವ ಪ್ರಕೃತಿ!

ಆದರೆ . . . . ಆ ಕನಸು ಕಂಡಷ್ಟೂ, ತಾನು ಸುಖದ ಬಗ್ಗೆ ಹಾತೊರೆದಷ್ಟೂ, ಮನದಲ್ಲಿ ನೆನೆದ ಗಂಡನನ್ನು ಮನವಾರೆ ಆಲಿಂಗಿಸಿದಷ್ಟೂ ಆ ಕನಸು ನಿಜವಾಗುವ ದಿನ ದೂರ ದೂರ ಸರಿಯುತ್ತಿತ್ತು ಅವಳ ಬಾಳಿನಲ್ಲಿ. ಅವಳಿಗೆ ತಿಳಿದ ಹೆಣ್ಣುಗಳೆಲ್ಲ ತಮ್ಮ ಬಾಳ ಸುಖವನ್ನು ಪಡೆದರು; ಸೀಮಂತದ ಉಡುಗೊರೆ ಧರಿಸಿಕೊಂಡರು; ತಾಯಂದಿರಾಗಿ ನಲಿದರು. ಆದರೂ, ಬಾಗಿ ಇನ್ನೂ ಕುಮಾರಿಯಾಗೇ ಉಳಿದಳು. ಬಡತನದ ಜೀವನ ಅವಳಿಗೆ ಹೊಸತಲ್ಲ. ಆದರೆ, ಅದು ಸಂಸಾರ ಸುಖಕ್ಕೆ ಅಡ್ಡಿಯಾಗಿ ನಿಲ್ಲುತ್ತೆ ಎಂದರಿತುದು ಈಗಲೇ. ಯೋಗ್ಯ ವರ ಸಿಗಲಾರ; ಸಿಕ್ಕಿದ ವರನನ್ನು ಬಂಗಾರದಿಂದ, ವೈಭವದ ವಿವಾಹದಿಂದ ತೃಪ್ತಿಪಡಿಸುವುದು ರಾಮಯ್ಯನ ಶಕ್ತಿಗೆ ಮೀರಿದ ಯತ್ನ. ಬಾಗಿಯನ್ನು ಅವಳ ತಂದೆಯ ಪ್ರಾಯದ 'ವರ' ನಿಗೆ ಕೊಡಲು ರಾಮಯ್ಯನ ಮನ ಒಪ್ಪದಾಯಿತು ಈ ವರಾನ್ವೇಷಣದ ದಿಗ್ವಿಜಯದಲ್ಲಿ ರಾಮಯ್ಯ ಸೋತು ಸುಣ್ಣವಾದರು. ಬಾಗಿ ತನ್ನ ಪತಿಯ ದಾರಿ ಕಾದು ಕಾದು ಬೆಂದು ಸುಣ್ಣವಾದಳು.

ತನ್ನ ಪ್ರಾಯದ ಗೆಳತಿಯರೆಲ್ಲ ಲಗ್ನವಾದರು. ಅವರ ಸಂಭ್ರಮದಲ್ಲಿ ತಾನೂ ಭಾಗಿಯಾಗಿದ್ದಳು. ಆ ಎಲ್ಲ ಉತ್ಸಾಹದ ಉತ್ಸವಗಳೂ ಅವಳ ಚಿಂತೆಯನ್ನು ಹೆಚ್ಚಿಸಿದುವು. 'ಏನೇ-ನಿನ್ನ ಸೀಮಂತಕ್ಕೆ ನನ್ನ ಮಗಳೇ ಆರತಿ ಮಾಡುತ್ತಾಳೆ' ಎಂಬ ಗೆಳತಿಯರ ನುಡಿಗಳು ಬಾಗಿಯ ಕಣ್ಣಲ್ಲಿ ನೀರೂರಿಸಿದುವು. ದುಃಖದ ಹಿನ್ನೆಲೆಗೆ ಕ್ರೋಧ ನಿಂತು-'ನಾನೂ ಒಂದು ದಿನ ಗಂಡನ ಜತೆಗೆ ನಲಿವೇನು; ಈ ನುಡಿಗೆ ತಕ್ಕ ಉತ್ತರವಿತ್ತೇನು' ಎಂಬ ನೋವಿನ ಗೀತ ಹಾಡುತ್ತಿತ್ತು ಅವಳ ಮನ. ಹೆಣ್ಣಿನ ಹೆಮ್ಮೆ ಹೆಣ್ಣಿನ ಕೆಚ್ಚು ಅವಳ ಎದೆಯಲ್ಲಿ ಆಗಾಗ ಬುಸುಗುಟ್ಟುತ್ತಿತ್ತು. ಅಚ್ಚಳಿಯದ ಸುಖ ತನ್ನದಾಗುವ ದಿನವನ್ನು ಬಾಗಿ ಕಾದಿದ್ದಳು.

ಅಂತೂ ಬಾಗಿ ಮದುವೆಯಾದಳು. ನೋಟಕ್ಕೆ ಕುರೂಪಿಯೇನೂ ಅಲ್ಲ ಸೋಮನಾಥ; ಹಳ್ಳಿಯಲ್ಲೇ ಬೆಳೆದವನು ಎಂಟನೇ ವರ್ಷದಲ್ಲಿ

ಶಾಲೆ ಸೇರಿ ಹೇಗೂ ಐದನೇ ಕ್ಲಾಸು ಕಲಿತ: ಈಗ ಶಾಲಾ ಮಾಸ್ತರ. ಅದೇ ದೊಡ್ಡ ಹುದ್ದೆ ಅವನಿಗೆ. ಊರ ಪಟೇಲರಿಗೆ ಸಿಗುವುದು ಹದಿಮೂರು ರೂಪಾಯಿ ಸಂಬಳ; ಅದಕ್ಕೂ ಹೆಚ್ಚಿಗೆ ಬರುತ್ತಿತ್ತು ಅವನಿಗೆ. ಹದಿನೈದು ರೂಪಾಯಿ ಸಂಬಳ ಪಡೆವ ಮಾಸ್ತರ ಆತ ತನ್ನ ಕನಸಿನ ಪತಿ ತನಗೆ ದೊರೆಯಲಿಲ್ಲೆಂದು ಬಾಗಿ ಕುಗ್ಗಿದರೂ, ಕಾದು ಕಾದು ಬೇಸತ್ತಿದ್ದ ಅವಳ ಹೃದಯಕ್ಕೆ ಗಂಡನಾದರೆ ಸಾಕು—ಎಂಬ ಭಾವ ಬಂದಿತ್ತು. ತನಗಾಗಿ ತಂದೆ ವರನ ಬೇಟೆ ನಡೆಸಿದ ಕತೆ ಅವಳಿಗೆ ಗೊತ್ತು. ಈಗ ಈ ಸಂಬಂಧವನ್ನೂ ತೊರೆದರೆ ಮುಂದೆ? ಗೆಳತಿಯರ ಕಿಲಕಿಲ ನಗು; ಅವರ ಮೂದಲಿಕೆ ಅವಳ ಮನಸ್ಸನ್ನು ತಿರುಗಿಸಿತು. ಹಣೆಯಲ್ಲಿ ಬರೆದಿದ್ದರೆ ಇವನೇ ಏಕೆ ಧನಿಕನಾಗಬಾರದು? ಈತನೇ ತನಗೆ ಬೇಕಾದ ಸಕಲ ಸುಖವನ್ನು ಒದಗಿಸಬಾರದು? ತನ್ನ ಪ್ರೇಮ, ಪ್ರಣಯ, ಸುಖ, ಐಹಿಕ ಸ್ವರ್ಗದ ಕನಸನ್ನೆಲ್ಲ ಇವನೇ ತನಗೆ ಒದಗಿಸಲಾರನೇನು? ಬಾಗಿಯ ತಪ್ತ ಹೃದಯಕ್ಕೆ ಮಳೆಹನಿ ಉದುರಿದಂತಾಯಿತು. ಎಷ್ಟು ವರ್ಷಗಳಿಂದ ಆಕೆ ಕಾದಿಲ್ಲ? ಈಗ ಆ ಇನಿಯ ಒಲಿದು ಬಂದಿದ್ದಾನೆ.

ಸೋಮನಾಥ ಗಟ್ಟಿಮುಟ್ಟಾದ ಆಳು; ನೋಟಕ್ಕೆ ದೃಢಕಾಯನಂತೆ ಕಾಣದಿದ್ದರೂ, ಅವನ ಎಲುಬಿನ ಶಕ್ತಿ, ಇಡೀ ದಿನ ದುಡಿದರೂ ಕುಗ್ಗದ ಉತ್ಸಾಹ ತಂದಿತ್ತು ಅವನಿಗೆ. ಮನೆಕೆಲಸ, ತಮಗಿರುವ ಅಲ್ಪಸ್ವಲ್ಪ ಜಮೀನಿನ ಕೆಲಸಗಳನ್ನು ಮುಗಿಸಿ ಮೂರು ಮೈಲು ದೂರದ ಶಾಲೆಗೆ ಹೋಗುತ್ತಿದ್ದ ಸಂಜೆಗೆ ಅಲ್ಲಿಂದ ಹಿಂತಿರುಗಿದನೆಂದರೆ ಎತ್ತು-ಕೋಣಗಳಿಗೆ ನೀರೆರೆಯಬೇಕು; ಹುಲ್ಲು ಹಾಕಬೇಕು. ಮನೆಯ ಆಕಳುಗಳ ಆರೈಕೆಯೆಲ್ಲ ಅವನ ಪಾಲಿನದು. ರಜಾದಿನಗಳಲ್ಲಿ ಸೊಪ್ಪು ತರುವುದೂ, ಗೊಬ್ಬರ ಎತ್ತಿ ಹೊರಗಡೆಯಲ್ಲಿ ಇದ್ದ ಕುಳಿಯಲ್ಲಿ ತುಂಬುವುದೂ ಅವನ ಕೆಲಸ. ಯಾವಾಗಲೂ ಏನಾದರೊಂದು ಕೆಲಸ ಮಾಡುತ್ತಲೇ ಇರಬೇಕು ಅವನಿಗೆ. ಸುಮ್ಮನಿರುವ ಪ್ರಾಣಿಯೇ ಅಲ್ಲ. ಭಾಗೀರಥಿಯ ವಿವಾಹದ ವಿಚಾರ ಬಂದಾಗ ಅವನೇ ಆ ಹೆಣ್ಣನ್ನೊಮ್ಮೆ ಯಾವುದೋ ಮದುವೆಯ ಸಂದರ್ಭದಲ್ಲಿ ನೋಡಿದ್ದ. ಅವಳ ಯೌವ್ವನ, ರೂಪ-ಅವನ ಮನ ಸೆಳೆದಿತ್ತು. ಎಂತಲೇ ಆಗಲಿ ಎಂದೂ ಉತ್ತರವಿತ್ತಿದ್ದ. ಗಂಡನ ಬರವನ್ನೇ ಕಾದಿದ್ದ ಬಾಗಿಗೆ; ಅವಳನ್ನಿದಿರು ನೋಡುತ್ತಿದ್ದವನೇ ದೊರೆತ.

ಹಣ್ಣು ಬೇಕೆಂದು ಬಯಸಿದವರು ಅದು ದೊರೆತಾಗ ತಿನ್ನದೆ ಕುಳಿತುಕೊಳ್ಳುವುದು ಸಾಧ್ಯವೇನು? ಬಾಗಿ ತನ್ನ ಕನಸಿನ ಸ್ವರ್ಗ ಕಂಡಳು. ಅದು ಪೂರ್ಣವೋ ಅಪೂರ್ಣವೋ ಅವಳು ಅರಿಯಳು. ಆದರೆ, ಅವಳು ಬಯಸಿದ್ದ, ಅದೇನೆಂದು ನೋಡಬೇಕು ಎಂದು ಹವಣಿಸುತ್ತಿದ್ದ ಸುಖ ಅವಳಿಗೆ ದೊರೆಯಿತು. ನೋಮನಾಥನೂ ತಡವಾಗೇ ವಿವಾಹವಾದವನು. ಇಬ್ಬರೂ ಕೂಡಿ ನಲಿದರು; ಎಂತಲೇ ಬಾಗಿ ತಾಯಿಯಾದಳು.

ಜೀವನದಲ್ಲಿ ಅದು ಬೇಕು-ಇದು ಬೇಕು-ಎಂದು ಬಯಸುವುದು ಮಾನವನ ಗುಣ. ಆ ಬೇಕು ಪೂರೈಕೆಯಾದಾಗ ತೃಪ್ತಿಯೂ ಉಂಟಾ ಗುತ್ತೆ. ಆದರೂ, ಬೇಕುಗಳಿಗೂ ತೃಪ್ತಿಗಳಿಗೂ ಮಾನವಜೀವ ಎಂದೂ ಕೊನೆಯನ್ನು ಕಂಡಿಲ್ಲ. ಕಂಡಿದ್ದರೆ ಆತ ಪ್ರಗತಿಪಥದಲ್ಲಿ ಮುನ್ನಡೆಯು ತ್ತಿರಲಿಲ್ಲ. ತಾನು ಬಯಸಿದುದನ್ನು ಪಡೆದಾಗ ಹೊಂದುವ ತೃಪ್ತಿ ಕೆಲ ನಿಮಿಷಗಳಲ್ಲೇ ಸಾಕು ಎನಿಸಬಹುದು ಮನುಷ್ಯನಿಗೆ. ಅಥವಾ ಆ 'ಇದು ಸಾಕು' ಎಂಬ ಭಾವ ಮೂಡಲು ಹತ್ತಾರು ವರ್ಷಗಳು ಬೇಕಾ ಗಲೂ ಬಹುದು. ತಮ್ಮ ಬಾಳಿನಲ್ಲಿ ಕೊನೆಯ ಗಳಿಗೆಯ ವರೆಗೂ ಈ ತೃಪ್ತಿ ಪಡೆಯದೇ ಇರುವವರೂ ಇಲ್ಲವೆಂದಿಲ್ಲ.

ಸಂಸಾರಸುಖವನ್ನು ಬಯಸಿ, ಅದನ್ನೇ ಹಂಬಲಿಸಿ, ಕನಸು ಕಾಣು ತ್ತಿದ್ದ ಬಾಗಿ ಬಹಳ ದಿನಗಳ ತಪಸ್ಸಿನ ಅನಂತರ ಅದನ್ನು ಪಡೆದಳು. ತಾರು ಣ್ಯದ ಏರಿಕೆಯಲ್ಲಿ ಬಿಸಿರಕ್ತ ಧುಮುಧುಮು ದುಡಿಯುತ್ತಿರುವಾಗಲೇ ಅದು ದೊರೆಯಿತು. ಆದರೆ-ಇನ್ನು ಸಾಕು ಎಂಬ ಭಾವವಿನ್ನೂ ಮೂಡಿರಲಿಲ್ಲ ಆ ಮಗು ಅವಳ ಕಾಮದ ಚಿಂತನೆಯಿಂದ ಅವಳ ಮನ ಕದಲಿಸಲು ಶಕ್ತ ವಾಗಲಿಲ್ಲ. ಅವಳಿಗೆ ತೃಪ್ತಿ ಸಂತೋಷಗಳನ್ನದು ತಂದು ಕೊಟ್ಟಷ್ಟೂ ಅತೃಪ್ತಿಯನ್ನೂ ಉಂಟುಮಾಡಿತ್ತು. ಮಗುವನ್ನು ಲಾಲಿಸಿ ಪಾಲಿಸಿ ಮುದ್ದಾಡಿದಷ್ಟೂ ಪತಿಯ ರೂಪ ಅವಳ ಮುಂದೆ ನಿಲ್ಲುತ್ತಿತ್ತು. ತನ್ನ ಕನಸೆಲ್ಲ ಒಂದೊಂದಾಗಿ ಕಾಣಿಸಿಕೊಳ್ಳುತ್ತಿತ್ತು. ಕೂಡಲೇ ಮಗುವಿನ ಚಿಂತೆ ಮರೆತು ಹೋಗುತ್ತಿತ್ತು. ಅದು ತಮ್ಮಿಬ್ಬರ ಸುಖಜೀವನಕ್ಕೆ ಸಲಿ ದಾಟಕ್ಕೆ ತಡೆಯಾಗಿದೆ; ತನ್ನ ಮೇಲೆ ತನ್ನ ಹತೋಟಿಯನ್ನಿಡಲು ಯತ್ನಿ ಸುತ್ತಿದೆ ಎಂದು ಹೊರಗಿನ ಮನ ಹೇಳುತ್ತಿತ್ತು. ಅದರ ಹಿಂದೆಯೇ ಒಳ ಗಿನ ಹೃದಯ-ಅದು ನಿಮ್ಮ ಸುಖಜೀವನದ ಸೃಷ್ಟಿ, ಸ್ಥಿತಿ, ಲಯಗಳ

ಕಾರಣಪುರುಷ ಎಂದು ಕೂಗಿ ಎಚ್ಚರಿಸುತ್ತಲೂ ಇತ್ತು. ಅಮರವಾದ ಈ ಅವಳಿಜವಳಿ ಭಾವಗಳ ಹೊಲವಾಗಿತ್ತು ಬಾಗಿಯ ಮನಸ್ಸು.

ಈ ವಿಚಾರವಾದಗಳ ಘರ್ಷಣೆ ನಡೆಯುತ್ತಿದ್ದಂತೆ ವರ್ಷ ಉರುಳಿತು. ಸುಖದ ಸವಿ ಸವಿಯುತ್ತಿದ್ದಂತೆ ಅದು ಮುರಿದು ಬಿತ್ತು. ಸೋಮನಾಥ ಒಂದೇ ವಾರ ಹಾಸಿಗೆ ಹಿಡಿದ. ಆತ ಮತ್ತೆ ಮೇಲೇಳಲಿಲ್ಲ. ತನ್ನ ಪತ್ನಿಯನ್ನು ನಗುನಗುತ್ತ ಮಾತನಾಡಿಸಲಿಲ್ಲ. ಬಾಗಿ ವಿಧವೆಯಾದಳು.

ಕನಸು ಕಾಣುತ್ತ ಕಾಲಕಳೆದಾಗ ಅದೇ ಸುಖವಾಗಿರುತ್ತದೆ. ಆ ಕನಸು ಕಾರ್ಯರೂಪಕ್ಕೆ ಬಂದರೆ ಅಂತಹ ಸುಖಕ್ಕೆ ಸಮನಾದ್ದಿಲ್ಲ ಎನಿಸುತ್ತದೆ. ಕನಸು ಕೈಗೂಡಿತು. ಅವಳು ಕಾಣ ಬಯಸಿದ್ದ ಎಲ್ಲ ಸುಖಗಳೂ ಕೈಗೂಡದಿದ್ದರೂ ಹೆಚ್ಚಿನವು ದೊರೆತವು. ಬಾಯಾರಿ ಬಳಲಿದವನಿಗೆ ನೀರು ದೊರೆಯಿತು. ಅದೆಂತಹ ನೀರೋ–ಯಾರಿಗೆ ಬೇಕದರ ಚಿಂತೆ? ಆ ಸಿಹಿತಿಂಡಿಯ ರುಚಿ ಹೇಗಿರಬೇಕೆಂಬ ಪರವೆಯೇ ಇಲ್ಲದವರಿಗೆ ಆ ತಿಂಡಿಯ ರುಚಿ ಹೆಚ್ಚು ಕಡಿಮೆಯಾಗಿದ್ದರೆ ತಿಳಿಯುತ್ತೇನು? ಅಂತಹ ತಿಂಡಿ ನಾಲ್ಕಾರು ಕಡೆಗಳಲ್ಲಿ ತಿಂದಾಗ ಅಥವಾ ಅದರ ಬಗ್ಗೆ ಬೇರೆಯವರಾಡುವ ಮಾತು ಕೇಳಿದಾಗ ಅಂತರ ತಿಳಿದೀತು. ಆದರೆ ಬಿಸಿಲುಗುದುರೆಗಳನ್ನೆಲ್ಲ ಕಂಡವಳು, ಅವುಗಳನ್ನು ನಂಬಿದವಳು ಬಾಗಿ. ಅವು ನಿಜವಾದ ಜೀವನದಲ್ಲಿ ಕ್ರಿಯಾತ್ಮಕ ಬಾಳಿನಲ್ಲಿ ನೆನಸಾಗಲಾರವು—ಕನಸಾಗೇ ಉಳಿದಾವು ಎಂದಾಕೆಗೆ ತೋರಲಿಲ್ಲ. ಈಗ ಕನಸು ಕನಸಾಗೇ ಉಳಿದುದರ ಪರವೆಯಾಯಿತು. ಇಂತಹ ಸುಖದ ದಿನ ತಡೆಯಿಲ್ಲದೆ ಬರಲಿ; ಈ ಬಾಳು ಅಮರವಾಗಲಿ ಎಂದವಳು ಬಯಸಿದಷ್ಟಕ್ಕೂ ಅದು ಅಲ್ಪವಾಯಿತು; ಕ್ಷಣಿಕವಾಯಿತು. ಮೊನ್ನೆ ಜೀವನದ ಸಂಗಾತಿಯನ್ನು ಪಡೆದು, ಸುಖದ ಸವಿ ಸವಿದು, ನಿನ್ನೆ ತಾಯಿಯಾಗಿ ಇಂದು ವಿಧವೆಯಾದೆ ಎಂದು ನೆನಸಿದಷ್ಟೂ ಬಾಗಿ ಹುಚ್ಚಳಂತಾದಳು. ಜಗತ್ತೇ ಶೂನ್ಯವಾಗಿ ಅವಳಿಗೆ ಕಂಡಿತು. ತಾನು ಕನಸನ್ನು ಕಾಣುತ್ತಿದ್ದೆ; ನಾನಿನ್ನೂ ಅವಿವಾಹಿತೆ ಎಂದು ಹೇಳಿ ನಲಿಯುವಷ್ಟು ಬುದ್ಧಿ ಮಂಕಾಯಿತು.

ಮೂರು ದಿನ ದಾಟಿ ಮುಂಜಾವಕ್ಕೆ ಮುಗಿಯಿತು. ನಿನ್ನ ಸಂಸಾರದ ಸುಖ ಜೀವನ ಮುಗಿಯಿತು ಎಂದು ಸಮಾಜ ಅವಳನ್ನೆಚ್ಚರಿಸಿತು.

ಆದರೆ . . . . .

ತನಗೆ ಬೇಕಾದಾಗ, ಬೇಕಾದ ಪತಿಯನ್ನು ಕೊಡಲಾರದ ಸಮಾಜ ಈಗ ಈ ಅಪ್ಪಣೆ ಮಾಡಲು ಯಾವ ಅಧಿಕಾರ ಪಡೆದಿದೆ? ಎರಡು ವರ್ಷ ಗಳ ಸುಖಜೀವನ ನಡೆಸಲು ತಾನು ನಾಲ್ಕು ವರ್ಷಗಳ ಕನಸು ಕಾಣ ಬೇಕಾಯಿತೇ? ಗೆಳತಿಯರೆಲ್ಲ ಇನ್ನೂ ತಮ್ಮ ನಗೆ ನಿಲ್ಲಿಸಿಲ್ಲ! ಅವರ ಸುಖ ಅಳಿದಿಲ್ಲ. ಬಾಳ ಬೆಳಕು ಆರಿಲ್ಲ—ಅಮರವಾಗಿ ಉರಿಯುತ್ತಿದೆ. ತನಗೆ ಮಾತ್ರ ಈ ಸ್ಥಿತಿ ಏಕೆ? ಬಾಗಿಗೆ ಈ ಸಮಸ್ಯೆಗಳ ಸಂತೆ ಯಾವ ಉತ್ತರ ವನ್ನೂ ಕೊಡದಾದುವು. ದೇವರು, ವಿಧಿ, ಸಮಾಜ, ತಾನು, ತನ್ನ ಪತಿ, ಮಗು . . . . . ಎಲ್ಲರಲ್ಲೂ ಜಗುಪ್ಸೆ ಮೂಡಿತು. ಅದು ದಿನೇ ದಿನೇ ಬೆಳೆದು ಬೃಹದಾಕಾರ ತಳೆಯಿತು. ಜಗತ್ತೇ ಶೂನ್ಯ. ಹೆಣ್ಣಾಗಿ ಬಾಳಲೂ ಈ ಸಮಾಜದಲ್ಲಿ ಆಸ್ಪದವಿಲ್ಲ. ಇದೇಕೆ ಈ ಕಟ್ಟುಕಟ್ಟಳೆ. ತನ್ನ ಜೀವ ನಾಧಾರನಾದ ಪತಿಯನ್ನು ಕಳೆದುಕೊಂಡು ದುಃಖದ ಬೆಂಕಿಯಲ್ಲಿ ನಾ ನರಳುತ್ತಿದ್ದೇನೆ. ಸಮಾಜದ ನೂರು ಕೈಗಳು ಏಕೆ ಹೀಗೆ ಬೆಂಕಿಗೆ ತುಪ್ಪ ಎರೆಯುತ್ತಿವೆ; ಗಾಯಕ್ಕೆ ಹುಳಿ ಹಿಂಡುತ್ತಿವೆ? ನನ್ನ ದುಃಖದಲ್ಲಿ ಭಾಗಿಗಳಾಗುವವರಾರೂ ಇಲ್ಲ. ತಮಗೂ ತುಂಬ ದುಃಖವಾಗಿದೆ ಎನ್ನುವ ಅತ್ತೆ, ಅತ್ತಿಗೆ, ನಾದಿನಿಯರೂ ನನ್ನ ದುಃಖ ತಿಳಿಯದೆ ರಾತ್ರಿಹಗಲು ಟೀಕಿ ಸುತ್ತಿದ್ದಾರೆ, ನಿಂದಿಸುತ್ತಿದ್ದಾರೆ. ತನ್ನ ಕಾಲ ಆಗಿಹೋಯಿತೆಂದು, ನಂಬಿ ದವರನ್ನೆಲ್ಲ ನಡುದಾರಿಯಲ್ಲಿ ಬಿಟ್ಟು ಪತಿ ಹೊರಟು ಹೋದರೆ ಅದು ಪತ್ನಿಯ ತಪ್ಪೇ?

ರೈತರ ಹೆಣ್ಣು ದುಗ್ಗಿ ತನ್ನ ಗಂಡನನ್ನು ಕಳೆದುಕೊಂಡಳು. ಅವಳು ಎರಡು ಮಕ್ಕಳ ತಾಯಿ. ಈಗ ಇನ್ನೊಬ್ಬನ ಪತ್ನಿಯಾಗಿ ಬಾಳುವೆ ನಡೆ ಸುತ್ತಿದ್ದಾಳೆ. ಸುಖವಾಗಿ ಸಂಸಾರ ನಡೆಸುತ್ತಿದ್ದಾಳೆ!

ಆದರೆ . . . . . ತಾನು . . . . . ?

ಬಾಗಿ ಚಿಂತೆಯನ್ನು ತಡೆಯಲಾರದೆ; ತನ್ನ ಮುಂದೆ ಸುಳಿವ ಸಮ ಸ್ಯೆಗಳಿಗೆ ಉತ್ತರ ಕಂಡುಕೊಳ್ಳಲಾಗದೆ ಅತ್ತು ಅತ್ತು ನೋತಳು. ಅವಳ ದುಃಖವನ್ನು ತೋಡಿಕೊಳ್ಳಲು ಅವಳಿಗೆ ದೊರೆತ ಗೆಳತಿಯರೆಂದರೆ ದುಗ್ಗಿ ಮತ್ತು ಮನೆಗೆ ತರಕಾರಿ ತಂದುಕೊಡುವ ಸೋಬಿನ. ಹಳೆಯ ಗೆಳತಿ ಯರೆಲ್ಲ ಒಂದು ದಿನ ಬಂದು ದುಃಖದ ಸೋಗು ಹಾಕಿ ಹೊರಟು

ಹೋದರು. ಅವರ ಸಂತಾಪ ಸೂಚನೆಯೆಲ್ಲ ಕೃತಕ; ಅವರ ಮನ ದೊಳಗೆ ವಿಕಟ ನಗು ಕುಣಿಯುತ್ತಿದೆ ಎಂದು ಬಾಗಿಗೆ ಅನ್ನಿಸಿತ್ತು. ತನ್ನ ಜೀವನ ಬರಡಾಯಿತು; ತಾನಿನ್ನು ಬದುಕಿ ಪ್ರಯೋಜನವಿಲ್ಲ; ಮುಂದೆ ಕಾಣುವ ಒಂದೇ ಒಂದು ದಾರಿ ಆತ್ಮಹತ್ಯೆಯದು ಎಂದು ಎಷ್ಟೋ ಬಾರಿ ಅವಳಿಗೆ ತೋರಿತ್ತು. ಆದರೆ— ಆ ನಿರ್ಧಾರಕ್ಕೆ ಬರುವ ಮೊದಲೆ ಅವಳ ಮನ ಕೂಗಿ ಹೇಳುತ್ತಿತ್ತು: ಸತ್ತರೆ ಎಲ್ಲ ಶೂನ್ಯ; ಆ ಮೇಲೆ ಏನಿದೆ ಎಂದು ಕಂಡು ಬಂದವರು ಯಾರಿದ್ದಾರೆ? ಬಂದುದನ್ನೆಲ್ಲ ಧೈರ್ಯದಿಂದ ಇದಿರಿಸು—ಎಂದು. ತನ್ನ ಆತ್ಮೀಯರಾಗಿದ್ದ ಗೆಳತಿಯರೊಂದಿಗೆ ತನ್ನ ಮುಂದೆ ಸುಳಿಯುತ್ತಿದ್ದ ಸಮಸ್ಯೆಗಳನ್ನು, ಹೃದಯವನ್ನು ಅರೆಯುತ್ತಿದ್ದ ದುಃಖವನ್ನು ತೋಡಿಕೊಂಡು ಎದೆಯ ಭಾರ ಇಳಿಸಿಕೊಳ್ಳಲು ಯತ್ನಿಸು ತ್ತಿದ್ದಳು. ಆದರೂ—ಅವಳಿಗೆ ದೊರೆತ ಉತ್ತರ ಒಂದೇ—"ನಿಮ್ಮ ಜಾತಿಯಲ್ಲಿ ಹಾಗೆಲ್ಲ ಸಾಧ್ಯವಿಲ್ಲ ತಾಯಿ. ಅನುಭವಿಸಿಯೇ ತೀರಬೇಕು".

ಸಾಧ್ಯವಿಲ್ಲ! ಹಾಗಾದರೆ ಸಾಧ್ಯವಾಗುವುದೇನು? ವಿಧವೆಯಾದಳೆಂದು ಯಾವಜ್ಜೀವವೂ ಕಳೆದ ಸುಖದ ದಿನಗಳನ್ನು ನೆನೆನೆನೆದು ಕೊರಗುವಂತೆ ಮಾಡುವುದೇ? ಒಂದು ಬಳೆ, ಒಂದು ತುಂಡು ಹೂ, ಹಣೆಗೆ ಕುಂಕುಮ ಧರಿಸುವುದೂ ಅಸಾಧ್ಯವಾಗಿ ಅಧರ್ಮ ಎನ್ನಿಸಿ ತನ್ನ ಪ್ರಾಯದವರೆಲ್ಲ ಸಿಂಗ ರಿಸಿಕೊಂಡು ಮೆರೆಯುವುದನ್ನು ಕಾಣುತ್ತ ತಾನು ಮಾತ್ರ ಸನ್ಯಾಸಿನಿ ಯಾಗಿ ಬಾಳಬೇಕೆ? ತಾನು ಕಾಣುವ ದೇವರನ್ನು ಮರೆತು ಕಾಣದ ದೇವರ ಬಗ್ಗೆ ಚಿಂತಿಸುವುದು. ತನ್ನ ಜೀವನದಲ್ಲಿ ಅಂಧಕಾರವನ್ನು ತಂದುಕೊಂಡು ಆ ದೇವರನ್ನು ಬೆಳಗಲು ಹೂ ಬತ್ತಿ ಹೊಸೆಯುವುದು. ತನ್ನ ಕಳೆದ ಸುಖದ ಪ್ರತೀಕ ಎಂದು, ಭಾವೀ ಜೀವನದ ಸಾಧನ ಎಂದು ತನ್ನ ಕೂಸನ್ನು ಲಾಲಿಸಿ ಪಾಲಿಸಿ ಬೆಳೆಸುವುದು. ಇದೂ ಸಾಲದೆಂದು ಸಂಸಾರದ, ಸಮಾಜದ, ಸಾವಿರ ಚಾಟಿಏಟುಗಳನ್ನು ಹಗಲುರಾತ್ರಿ ಅನುಭವಿಸಿ ಹೃದಯವನ್ನು ಕಲ್ಲಾಗಿಸಿ ತಾನು ಮೂಕಪ್ರಾಣಿಯಾಗಿ ಉಸಿರು ಹಿಡಿದು ಬಾಳುವುದು. ಹಿಡಿಕೂಳಿಗಾಗಿ ಜೀವದ ಜೀವವಾಗು ವುದು! ಇದು ಸಮಾಜ ತನಗೆ ನಿರ್ಮಿಸಿದ ಕಟ್ಟು ಕಟ್ಟಳೆಯೇ?

ಈ ಚಿತ್ರ ನೆನೆದಷ್ಟು ಬಾಗಿಯ ಹೃದಯ ಕುದಿಯ ತೊಡಗಿತು ನೋಡಿನ ಕೆಚ್ಚು, ಅಸಹಾಯಕತೆಯ ಕಳಿರೂ ತಲೆ ಎತ್ತಿ ಹೋರಾಡ

ತೊಡಗಿದುವು ಅವಳ ಮನದಲ್ಲಿ. ತನ್ನ ಸುಖದ ಜೀವನಕ್ಕೆ ಕಾರಣವಾದ ಮನೆಯಲ್ಲೇ ದುಃಖದ ನೋವನ್ನು ಸಹಿಸಿಕೊಂಡು ಬಾಳುವುದು ಅವಳಿಂದ ಸಾಧ್ಯವಾಗಲಿಲ್ಲ. ತನ್ನ ಬಾಳ ಉಸಿರಾದ ತನ್ನ ಕೂಸನ್ನೆತ್ತಿಕೊಂಡು ತಂದೆಯ ಮನೆಗೆ ಹೊರಟಳು.

ತಬ್ಬಲಿಯಾದ ಮಗಳನ್ನು—ಸುಖವಾಗಿ ಬಾಳು ಮಗಳೇ ಎಂದು ಹರಸಿ ಕಳುಹಿಸಿದ್ದ ರಾಮಯ್ಯ ಪುನಃ ತಬ್ಬಲಿಯಾಗೇ ಬಂದಾಗ ಸ್ವಾಗತಿಸಿದರು. ಅವಳ ಜೀವನಕ್ಕಾದ ಆಘಾತದಿಂದ ನೊಂದು ಅವರೂ ಅರ್ಧರಾದರು. ಮೊಮ್ಮಗನ ಚಿಂತೆ ಅವರನ್ನು ಚೇತರಿಸಿಕೊಳ್ಳುವಂತೆ ಮಾಡಿತು.

ತಾನು ತನ್ನ ಸಂಗಾತಿಯಾಗಿ ಮಾಡಿಕೊಂಡ ರಾಮಾಯಣ, ಭಾರತ, ಭಾಗವತಗಳ ಉಪದೇಶದ ಸಾರವನ್ನು ಮಗಳಿಗೆ ತಿಳಿಸುತ್ತ ರಾಮಯ್ಯ ಅವಳ ದುಃಖವನ್ನು ಪರಿಹರಿಸಲೆತ್ನಿಸುತ್ತಿದ್ದರು. ಅವಳ ಮನಸ್ಸಿಗೆ ಒಂದಿಷ್ಟೂ ನೋವಾಗದಂತೆ ನಡೆದುಕೊಳ್ಳುತ್ತಿದ್ದರು. ಜತೆಗೆ ಅವರು ಅಶನಾರ್ಥದ ದಾವೆ ಬೇರೆ ಹಾಕಿದ್ದಾರೆ. ತಾನು ತನ್ನ ಜೀವನಾಧಾರವೆಂದು ಸಂಗ್ರಹಿಸಿದ ಪುಡಿಕಾಸೂ ಅದಕ್ಕಾಗಿ ಖರ್ಚಾಗಿದೆ. ದಾವೆಯಲ್ಲಿ ಜಯಗಳಿಸಿ ನಾಲ್ಕು ಕಾಸು ಬಂದರೆ ತನ್ನ ಮೊಮ್ಮಗನಿಗೆ ಸಹಾಯವಾದೀತೆಂದು ನಂಬಿದ್ದರು. ಆದರೆ ಈ ಎಲ್ಲ ಆನೆಗಳು, ಕನಸಿನ ಗೋಪುರಗಳು ಉರುಳಿ ಬೀಳುತ್ತವೆ ಎಂದವರು ಎಣಿಸಿರಲಿಲ್ಲ. ಅವರ ಉಪದೇಶ ಬಾಗಿಯ ಮನಸ್ಸನ್ನು ಧರ್ಮ ದೇವರುಗಳೆಡೆ ತಿರುಗಿಸಲು ಶಕ್ತವಾಗಲಿಲ್ಲ. ಆ ಉಪದೇಶಗಳನ್ನು ಕೇಳಿದಷ್ಟಕ್ಕೂ ಅವುಗಳ ಬಗ್ಗೆ ತಾತ್ಸಾರವೇ ಹೆಚ್ಚಾಗುತ್ತಿತ್ತು ಅವಳಿಗೆ ಗೆಳತಿಯರ ಮಾತು ಮೇಲಿಂದ ಮೇಲೆ ನೆನಪಿಗೆ ಬಂದು, ಅವಳ ಮನದಲ್ಲಿ ಪ್ರತಿಧ್ವನಿಗೊಡುತ್ತಿತ್ತು.

"ನಿಮ್ಮ ಜಾತಿಯಲ್ಲಿ ಅದು ಸಾಧ್ಯವಿಲ್ಲ ತಾಯಿ"

ಯಾಕೆ ಸಾಧ್ಯವಿಲ್ಲ . . . . . ?

ಗಂಡಸು ತನಗೆ ಒಪ್ಪಿಗೆಯಾದರೆ, ತನಗೆ ಬೇಕಾದರೆ, ಯಾವುದೋ ಜಾತಿಯ ಹೆಣ್ಣನ್ನು ಬಯಸಿ ಹೋಗಬಹುದು. ಅವಳ ಜಾತಿ ಯಾವುದೇ ಆದರೂ ಅವಳೊಡನೆ ನಲಿದಾಡಬಹುದು; ಅವಳನ್ನು ತನ್ನವಳಾಗಿ ಮಾಡಿಕೊಳ್ಳಬಹುದು. ಆದರೆ ಹೆಣ್ಣು ಹಾಗೆ ಮಾಡಿದರೆ ಅದು ತಪ್ಪೆ? ಉಳಿದ ಜಾತಿಯವರಲ್ಲಿ ಈ ಕಟ್ಟುಕಟ್ಟಳೆಯಿಲ್ಲ. ಬೇರೆ ಧರ್ಮದಲ್ಲಿ ಇಲ್ಲ. ತಾನು

ಆ ಜಾತಿಯವಳಾಗಲಾರೆನೇ? ತಾನೂ ತನಗೆ ಒಪ್ಪಿದ ದಾರಿ ತುಳಿಯಲಾರೆನೆ?

ಈ ಪ್ರಶ್ನೆ ಬಾಗಿಯ ಮನದಲ್ಲಿ ಸದಾ ನಲಿಯುತ್ತಿತ್ತು. ತಾನು ಈ ಜೀವನದಲ್ಲಿ ಐಹಿಕ ಸುಖ ಅನುಭವಿಸುವುದೇ ಸಾಧ್ಯವಿಲ್ಲವೇ? ಯಾರ ಸುಖಕ್ಕೂ ತಾನು ಅಡ್ಡ ಬಂದಿಲ್ಲ. ಯಾರಿಗೂ ಅನ್ಯಾಯ ಮಾಡಿಲ್ಲ. ಹಾಗಿದ್ದರೂ ಈ ಶಿಕ್ಷೆ ತನಗೇಕೆ? ಮಾತೆತ್ತಿದರೆ ತಂದೆ ಪೂರ್ವಜನ್ಮದ ಕರ್ಮ ಎನ್ನುತ್ತಿದ್ದಾನೆ. ಆ ಕರ್ಮ ಯಾವುದು? ಅದರ ನೆನಪೂ ತನಗಿಲ್ಲ. ಹಾಗೆ ಕರ್ಮ ಮಾಡಿದ್ದರೆ ತಾನೇಕೆ ಈ ಜಾತಿಯಲ್ಲಿ ಹುಟ್ಟಿದೆ? ಬೇರೆ ಕೀಳು ಜಾತಿಯಲ್ಲಿ ಜನಿಸಬಾರದಾಗಿತ್ತೇ? ಪೂರ್ವಜನ್ಮ-ಭಾವೀ ಜನ್ಮಗಳ ಮಾಯಾಜಾಲ ಹೆಣೆದವರು ಯಾರು? ಗಂಡಸಿಗೆ ಈ ತಡೆ ಅಡ್ಡಿಪಡಿಸದಾದರೆ—ಹೆಣ್ಣಿಗೆ ಮಾತ್ರ ಆತಂಕವಾದರೆ—ಇದನ್ನೆಲ್ಲ ಗಂಡಸೇ ಸೃಜಿಸಿರಬೇಕಲ್ಲವೇ? ಮಗುವನ್ನು ಸಮಾಧಾನ ಪಡಿಸಲು ತಾಯಿ 'ಅದೋ ಗುಮ್ಮ-ಸುಮ್ಮನಿರು' ಎಂದಂತೆ ಇದು! ಎಂತಹ ಆಟಗಳು? ಬಾಗಿಗೆ ಈ ವಿಚಾರ ನೆನೆದಷ್ಟೂ ನಗು ಉಕ್ಕಿ ಬಂತು. ಅವಳು ಗಟ್ಟಿಯಾಗಿ ನಕ್ಕು ಬಿಟ್ಟಳು.

---

# ಮೂರು

ಗಟ್ಟಿಯಾಗಿ ಯಾರೋ ನಕ್ಕುದನ್ನು ಕಂಡು ಅಂತೋನಿ ತಿರುಗಿ ನೋಡಿದ.

ಮತ್ತಾರೂ ಅಲ್ಲ— ಆ ಹೆಂಗಸು.

ಯಾವಾಗಲೂ ಆ ದಾರಿಯಾಗಿ ಅಂತೋನಿ ಹೋಗುತ್ತಾನೆ. ಅದೂ ದಿನಕ್ಕೆ ಎರಡು ಬಾರಿ. ಬೆಳಿಗ್ಗೆ ಇಲ್ಲಿಂದ ಅರ್ಧ ಮೈಲು ದೂರದಲ್ಲಿರುವ ತನ್ನ ಮನೆಯಿಂದ ಹೊರಟು-ಮುಂದೆ ಒಂದು ಮೈಲಿ ದೂರದ ಪೇಟೆಗೆ ಹೋಗುತ್ತಾನೆ. ತನ್ನ ದಿನದ ದುಡಿತ ತೀರಿತೆಂದರೆ, ಕುಡಿದ್ದೋ ಕುಡಿಯದೆಯೋ ಮನೆಯೆಡೆ ಹೊರಡುತ್ತಾನೆ. ಕೆಲವೊಮ್ಮೆ ಮುಚ್ಚಂಜೆ

ಯಾಗುತ್ತೆ. ಇನ್ನು ಕೆಲಬಾರಿ ತುಂಬ ಕತ್ತಲಾಗುವುದೂ ಇದೆ. ಈ ಹೆಂಗಸನ್ನು ಆತ ಕಳೆದ ಮೂರು ನಾಲ್ಕು ತಿಂಗಳಿಂದಲೂ ನೋಡುತ್ತಿದ್ದಾನೆ. ಒಂದೋ ಮನೆಯಂಗಳದಲ್ಲಿ; ಇಲ್ಲವೇ ಮನೆಯ ಹಿಂದೆ ಭಾವಿ ಕಟ್ಟೆಯ ಬಳಿ. ಅಂತೂ ದಿನಕ್ಕೊಮ್ಮೆ ಅವಳನ್ನು ನೋಡದೆ ಇಲ್ಲ. ಆದರೆ, ನೋಡಬೇಕೆಂದು ಆತ ಆ ಕಡೆ ಎಂದೂ ನೋಡಿಲ್ಲ. ತನ್ನ ಕೆಲಸವಾಯಿತು, ತಾನಾಯಿತು; ಅದು ಅವನ ಪ್ರಕೃತಿ.

ಆದರೆ ಇಂದು ವಿಚಿತ್ರವಾಗಿದೆ ಸ್ಥಿತಿ. ಎಂದೂ ಆ ಹೆಣ್ಣು ಈ ರೀತಿ ನಕ್ಕುದನ್ನು ಆತ ಕಂಡಿರಲಿಲ್ಲ. ನಿನ್ನೆ ವರೆಗೂ ಸುಖವಾಗಿದ್ದವಳಿಗೆ ಇಂದೇನಾಯಿತು? ಹುಚ್ಚೇ? ಯಾರು ಯಾಕೆ ನಗುತ್ತಾರೆ ಎಂದು ನೋಡೋಣವೆಂದು ಆತ ಆ ಕಡೆ ತಿರುಗಿದರೆ ಅಲ್ಲಿ ಬೇರೆ ಯಾರೂ ಕಾಣಿಸಲಿಲ್ಲ. ಆ ಹೆಂಗುಸೊಬ್ಬಳೇ.

ಅಂತೋನಿ ಅವಳೆಡೆಗೇ ಆಶ್ಚರ್ಯದಿಂದ ನೋಡಿದ.

ನೆಟ್ಟ ನೋಟದಿಂದ, ಮುಗುಳು ನಗೆ ಬೀರುತ್ತ ಬಾಗಿ ಅವನನ್ನೇ ದಿಟ್ಟಿಸಿ ನೋಡುತ್ತಿದ್ದಳು.

ಬಾಗಿ ಭಾವನಾ ಸಾಮ್ರಾಜ್ಯದಿಂದ ಕೆಳಕ್ಕಿಳಿದಳು. ಎಚ್ಚರಗೊಂಡಳು. ಆದರೂ ಅವನೆಡೆಯಿಂದ ದೃಷ್ಟಿ ಚಲಿಸುವುದು ಅವಳಿಗೆ ಸಾಧ್ಯವಾಗಲಿಲ್ಲ. ತಾನೇ ಧೈರ್ಯ ತಂದುಕೊಂಡಳು.

"ಏನು?"

ಅಂತೋನಿ ತಬ್ಬಿಬ್ಬಾದ. ತಾನು ಹಾಗೆ ನೋಡಬಾರದಿತ್ತು; ಏನು ತಿಳಿದುಕೊಂಡಳೋ ಆಕೆ ಎಂದು ಭೀತನಾದ. "ಏನೂ ಇಲ್ಲ . . . . ." ಎಂದು ಮುಖ ತಿರುಗಿಸಿ ಹೊರಡಲು ಅನುವಾದ.

"ಏನಾಗಬೇಕು. ಬನ್ನಿ . . . . "

ಇನ್ನು ಹೊರಟು ಹೋಗಬಾರದು—ಎಂದುಕೊಂಡು, ಕ್ಷಮೆಯಾಚಿಸಿ ತನ್ನ ದಾರಿ ಹಿಡಿಯಲು ನಿರ್ಧರಿಸಿದ ಅಂತೋನಿ.

"ಯಾರೋ ನಕ್ಕುದು ಕೇಳಿಸಿತು; ತಿರುಗಿದೆ. ತಾವು ಯಾಕೆ ನಗುತ್ತೀರಿ ಎಂತ ತಿಳಿಯದೆ ನೋಡಿದೆ. ಕ್ಷಮಿಸಿ . . . . ನಾ ಬರುತ್ತೇನೆ"

ಅಂತೋನಿ ಮನೆಯ ಅಂಗಳಕ್ಕೆ ಬಂದ. ಬಾಗಿ ನಗುತ್ತಲೇ ಸ್ವಾಗತಿಸಿದಳು.

"ಬನ್ನಿ . . . . ಅವಸರವೇನು? . . . . ನಿಮಗೆ ಎಲ್ಲಿ?"

"ಇಲ್ಲೇ ಹೊಲದ ಆ ಕಡೆ ತಾಯಿ. ದ್ರಾವಿದನ ಮನೆಯವ ನಾನು. ಡ್ರೈವರ್ ಕೆಲಸ ಮಾಡುತ್ತಿದ್ದೇನೆ"

"ನಿಮ್ಮದು ಕ್ರೈಸ್ತರ ಜಾತಿ . . . ."

"ಹೌದು ತಾಯಿ"

ಅಂತೋನಿ ಚಾವಡಿಗೆ—ಒರಗಿ ನಿಂತುಕೊಂಡ. ಬಾಗಿಯನ್ನು ನೋಡುತ್ತ ನಿಲ್ಲೋಣವೆಂದು ಅವನ ಮನಸ್ಸು ಆದರೆ ಕೆಲಸಕ್ಕೆ ಹೋಗಬೇಕು. ಎಂಟು ಗಂಟೆಗೆ ಅವನ ಬಸ್ ಹೊರಡಬೇಕು. ತಡ ವಾದರೆ ತೊಂದರೆ. ಬಾಗಿ ಚಾವಡಿಯ ಕಂಭಕ್ಕೆ ಒರಗಿ ಕುಳಿತ್ತಿದ್ದಳು. ಅವಳು ಬೆಳಗಿನ ತನ್ನ ಕರ್ತವ್ಯವನ್ನೆಲ್ಲ ಆ ದಿನ ಮರೆತಂತಿತ್ತು. ಕೂದಲು ಅಸ್ತವ್ಯಸ್ತವಾಗಿತ್ತು. ಸೀರೆಯ ಸೆರಗು ಮುದ್ದೆಯಾಗಿ ಎದೆಯ ನಡು ವಿಂದ ಹಾದು ಹೋಗಿತ್ತು. ಅಂತೋನಿ ಬಂದುದೂ ಅವಳಿಗೆ ಲಜ್ಜೆ ಯನ್ನು ತಂದಂತಿರಲಿಲ್ಲ. ಅವಳ ಕನಸು ಇನ್ನೂ ಅಳಿದಂತಿರಲಿಲ್ಲ

"ಕೂಡಿ . . . . . ಮೇಲಕ್ಕೆ ಬನ್ನಿ . . . . ."

"ಇಲ್ಲ ತಾಯಿ . . . . ಕೆಲಸಕ್ಕೆ ಹೋಗಬೇಕು"

"ನಮ್ಮ ನೋಬೀನ ಬಾಯಿ ಜಾತಿಯವರು"

"ಹೌದು . . . . ."

"ನಿಮ್ಮ ಹೆಸರು . . . . ."

"ಅಂತೋನಿ . . . . ."

ಅವಳ ಮುಖದಲ್ಲಿ ಒಂದು ನಗು ಮಿಂಚಿತು. ಅಂತೋನಿ ಮಾತು ಬದಲಿಸಲೆಂದು ಕೇಳಿದ.

"ರಾಯರು ಇಲ್ಲವೇನು?

"ಇಲ್ಲ . . . . ಪೇಟೆಗೆ ಹೋಗಿದ್ದಾರೆ. ನಾಳೆ ಬರಬಹುದು"

ಇನ್ನು ನಿಂತರೆ ಚೆನ್ನಾಗಿಲ್ಲವೆಂದು ನಿರ್ಧರಿಸಿದ. ಈ ಸ್ಥಿತಿಯಲ್ಲಿರುವ ಹೆಣ್ಣಿನ ಜತೆಗೆ ತಾನು ಮಾತನಾಡುತ್ತ ನಿಂತುದನ್ನು ಯಾರಾದರೂ ನೋಡಿ ದರೆ? ಅದೂ ಬೆಳಗಿನಲ್ಲಿ. ಅಂತೋನಿ ಹೊರಡಲು ನಿರ್ಧರಿಸಿ ಚಾವಡಿ ಯಿಂದಿಳಿದ.

"ಹೊರಟರಾ? ಅವಸರ . . . ."

"ಕೆಲಸಕ್ಕೆ ಹೋಗಬೇಕು"

"ಆಗಲಿ. ಸಂಜೆ ಬರುತ್ತೀರಾ?"

ಅಂತೋನಿ ಉತ್ತರ ಕೊಡಲು ತಿಳಿಯದೆ ಹೊರಟು ಬಿಟ್ಟ. ಈ ಹೆಣ್ಣು ಹೀಗೇಕೆ ಮಾತನಾಡಿದಳು; ಇದೇಕೆ ಈ ರೀತಿ ವರ್ತಿಸಿದಳು ಎಂಬುದನ್ನು ಯೋಚಿಸಿದಷ್ಟಕ್ಕೂ ಅವನಿಗೆ ಸಮಸ್ಯೆಯಾಗೇ ಉಳಿಯಿತು ವಿಚಾರ.

ಹೌದು! ಅಂತೋನಿ ಸಂಜೆಗೆ ಹಿಂದುರುಗಿದ.

ಬಾಗಿ—ಅಂತೋನಿಯ ಗೆಳೆತನ ಹೆಚ್ಚಿತು. ಆಕೆ ತನ್ನ ಮುಂದೆ ಕುಳಿತು, ಆನಂದದಿಂದ ಮಾತನಾಡುತ್ತಿದ್ದರೆ ಸಾಕಾಗಿತ್ತು ಅವನಿಗೆ; ದಿನದ ಬಳಲಿಕೆಯೆಲ್ಲ ಮಾಯವಾಗುತ್ತಿತ್ತು. ಗೆಳೆತನ ಬಲವಾಯಿತು. ಎಂದೂ ಬೇರೆ ಬೇರೆಯಾಗದಂತೆ ಅವರು ಹೊಂದಿಕೊಂಡರು.

ಪ್ರಣಯ-ಪ್ರೇಮದ ಅನುಭವವಿಲ್ಲದ ಹೆಣ್ಣು ತಾನು ಕಾಣದ ಯಾವುದೋ ಸುಖದ ಕಲ್ಪನೆಯಲ್ಲಿ ನಲಿಯುತ್ತಾಳೆ. ಆ ಹಣ್ಣಿನ ರುಚಿ ನೋಡಬೇಕೆಂದು ಅವಳ ಮನ ಬಯಸುತ್ತಿರುತ್ತದೆ. ಆದರೆ ಸವಿಕಂಡ ನಾಯಿ ಕಿವಿಕೊಯ್ದರೂ ಬಿಡದು. ಬಾಗಿ ಆ ಸುಖದ ಸವಿಕಂಡಿದ್ದಾಳೆ. ಇನ್ನು ಬೇಕು ಎಂದಾಗಲೇ ಅವಳಿಗೆ ಅದು ದೊರೆಯುದಾಗಿದೆ. ಆ ಸುಖದ ಬಗ್ಗೆ ಚಿಂತಿಸಿ ಚಿಂತಿಸಿಯೇ ಅವಳ ನೆತ್ತರು ಎಷ್ಟೋ ಬಾರಿ ಕುದಿದು ತಣ್ಣಗಾಗಿದೆ. ಇಂದು ಅವಳ ಮನನೆಳೆವ ಸೂಜಿಕಲ್ಲು ದೊರೆಯಿತು. ಅವನ ಗೆಳೆತನ ಬೆಳೆದಂತೆ ಒಲುಮೆ ಪ್ರಣಯದ ಶಿಖರವನ್ನೇರಿತು. ತಾನೊಲಿದ ಗಂಡಿನ ದಾರಿ ಕಾದು, ಅವನು ತನ್ನೊಡನೆ ಆಟ ವಾಡುವ ಕನಸು ಕಂಡು, ಅವನ ತೋಳಲ್ಲಿ ಮಲಗಿದ ಚಿತ್ರವನ್ನು ನೆನೆದು, ಮೈಬಿಸಿಯೇರಿ, ಮುಖ ಬೆವರಿ, ಹಣೆಯಿಂದ ಬೆವರ ಹನಿ ಉದುರುತ್ತಿದ್ದಾಗ ಆ ಸಖ ಬಂದು ಸುಖವಿತ್ತರೆ ಹೆಣ್ಣು ಪರಿಪೂರ್ಣ ತೃಪ್ತಿ ಪಡೆಯುತ್ತಾಳೆ. ಬಾಗಿ ತನ್ನ ಜೀವನದಲ್ಲಿ ಪರಿಪೂರ್ಣವಾದ ದೇಹ ಸುಖ ಪಡೆದಳು; ಎಂತಲೇ ಅಂತೋನಿಯ ಆಜನ್ಮ ದಾಸಿಯಾದಳು. ಅವಳ ಪತಿಯಿತ್ತ ಸುಖ ಈ ಸುಖದ ಮುಂದೆ ತೃಣವಾಗಿ ಕಂಡಿತು ಅವಳಿಗೆ. ಇಡೀ ಜಗತ್ತೇ ತನ್ನಿದಿರು ನಿಂತು ಈ ದಾರಿ ಬಿಡು ಎಂದರೂ ತಾನು ಇದಿರಿಸಬಲ್ಲೆನೆಂಬ ಧೈರ್ಯ ಮೂಡಿತವಳ ಮನದಲ್ಲಿ. ಅವಳ

ಮುಂದಿರುವ ವಿಚಾರ ಒಂದೇ. ಅವಳಿಗೆ ಬೇಕಾದ ಸುಖವನ್ನು ಪೂರ್ಣ ಕೊಡಬಲ್ಲವನು ಅಂತೋನಿ ಒಬ್ಬನೇ! ಆ ಸುಖವನ್ನುಳಿದ ಸುಖ ಅವಳಿಗೆ ಪ್ರಪಂಚದಲ್ಲಿ ಬೇರೆ ಇಲ್ಲ. ಜೀವನದಲ್ಲಿ ಸಾವಿರ ಸಂಕಟಗಳು ಬರಲಿ. ಅಗಣಿತ ಚಿತ್ರಹಿಂಸೆಗಳು ಒದಗಲಿ, ಅವೆಲ್ಲವನ್ನೂ ಈ ಒಂದು ಗಳಿಗೆಯ ಸುಖವನ್ನು ನೆನೆದು ಇದಿರಿಸಬಲ್ಲೆನೆಂದುಕೊಂಡಳು ಬಾಗಿ. ಅವಳಿಗೆ ಗುರಿ ಕಂಡಿತು— ದಾರಿ ತಿಳಿದರೆ ಸಾಕು ಮುನ್ನಡೆಯಲು.

ತಿಂಗಳುಗಳೂ ಉರುಳಿದುವು. ರಾಮಯ್ಯನಿಗೆ ವಿಚಾರ ತಿಳಿಯಿತು. ಆದರೆ ಅವರು ಮೊದಲು ನಂಬಲಿಲ್ಲ ಊರವರೇ ವಾರ್ತೆ ತಿಳಿಸಿದರು. ಕೊನೆಗೆ ತಾನೇ ಕಣ್ಣಾರೆ ಕಂಡರು. ಅವರು ತನ್ನ ಮಗಳು ನಿಜವಾಗಿಯೂ ಅಡ್ಡದಾರಿ ಹಿಡಿದಿದ್ದಾಳೆ ಎಂದು ಖಚಿತ ಮಾಡಿಕೊಳ್ಳುವ ಹೊತ್ತಿಗೆ— ಅವರಿಬ್ಬರ ಪ್ರಣಯ ಎಂದೂ ಅಗಲದಷ್ಟು ಬಲವಾಗಿತ್ತು ಹಲವು ವಿಧದಿಂದ ಮಗಳಿಗೆ ಬುದ್ಧಿ ಹೇಳಿದರು. ಶಾಸ್ತ್ರಪುರಾಣಗಳನ್ನೆಲ್ಲ ತಿರುವಿ ಹಾಕಿ ಉಪದೇಶ ಮಾಡಿದರು. ಆದರೂ ಅವಳು ತನ್ನ ದಾರಿ ಬಿಡಲಿಲ್ಲ ತಂದೆಯ ಉಪದೇಶವನ್ನು ಕೇಳಿ ಈ ದಾರಿ ತಪ್ಪು ಎಂದವಳು ನಿರ್ಧರಿಸಿಯೇ ಬಿಡುತ್ತಿದ್ದಳು. ಆದರೆ, ಅಂತೋನಿ ಬಂದು ಅವಳೆದುರು ನಿಂತರೆ. ಸಾಕು. ಇಡೀ ಲೋಕವನ್ನೇ ಮರೆಯುತ್ತಿದ್ದಳು. ಅವನನ್ನು ಮರೆತು ಬಿಡಲು ಎಷ್ಟೋ ಬಾರಿ ಯತ್ನಿಸಿದಳು. ಹಾಗೆ ಯತ್ನಿಸಿದಷ್ಟೂ ಅವರ ಸ್ನೇಹ ಅಧಿಕವಾಯಿತು.

ತನ್ನ ಮಗು ಕಿಟ್ಟುವನ್ನು ನೋಡಿದಾಗಲೆಲ್ಲ ಅವಳ ಮನ ಹಳೆಯ ಚಿತ್ರದ ಕಡೆಗೇ ತಿರುಗುತ್ತಿತ್ತು. ಆದರೆ ಅದು ಜುಗುಪ್ಸೆಯನ್ನೇ ಉಂಟು ಮಾಡಿದೆ ಅವಳಲ್ಲಿ ಅನ್ಯ ಜಾತಿಯ ಅಂತೋನಿಯ ಗೆಳೆತನ ಇನ್ನೊಂದು ಮಗುವನ್ನು ತನಗೆ ಕೊಟ್ಟರೆ— ಎಂಬ ಭೀತಿ ಬಂದಾಗ, ಆ ನೀತಿಯಿಂದ ಸಮಾಜ ತನಗೆ ಮಾಡಬಹುದಾದ ಪ್ರತೀಕಾರಗಳನ್ನು ನೆನೆದಾಗ ಅವಳ ಮನ ನಡುಗುತ್ತಿತ್ತು, ಕ್ಷಣದಲ್ಲಿ ಬಂದದ್ದೆಲ್ಲ ಬರಲಿ, ಅನುಭವಿಸಲೇ ಬೇಕು ಎಂದು ನಿರ್ಧರಿಸಿ ಸುಮ್ಮನಾಗುತ್ತಿದ್ದಳು. ನಿರ್ಧಾರ ಅಳಿವ ಮುನ್ನ 'ಅಮ್ಮಾ' ಎಂಬ ಕೂಗು ಮತ್ತೆ ಕೇಳಿಸುತ್ತಿತ್ತು.

ಇಂದಿನ ಪ್ರಣಯವಿಲಾಸ ಇಂತೇ ನಡೆದರೆ? ಬೇರೆ ಸ್ವರ್ಗಸುಖ ಬೇಡ; ಸಾವೂ ಬೇಡ. ಅದೇ ಗರ್ಭ ತಳೆದರೆ? ಪುನಃ ಸುಖಕ್ಕೆ ತಡೆ.

ಅದೂ ಅಲ್ಲದೆ, ಗರ್ಭವತಿಯಾಗುವ ಅಧಿಕಾರವಾದರೂ ಇದೆಯೇ? ಹೆರುವ ಅಧಿಕಾರವೂ ಇಲ್ಲ ವಿಧವೆಗೆ. ಊರಜನ, ತನ್ನ ನಿತ್ಯದ ದುಃಖಕ್ಕೆ ಕಾರಣರಾದವರು ಸುಮ್ಮನಿರುತ್ತಾರೆಯೇ? ತನ್ನ ಸಂಕಟದಲ್ಲೇ ಆನಂದ ವನ್ನು ಪಡೆವ ಸಮಾಜ ವಿಧವೆ-ವ್ಯಭಿಚಾರಿ-ಎಂದು ಹುಯಿಲೆಬ್ಬಿಸುವು ದಿಲ್ಲವೇ? ಆ ಚಿತ್ರಹಿಂಸೆಯಿಂದ ತಪ್ಪಿಸಿಕೊಳ್ಳಲು ವಿಧವೆಯರಿಗಾಗಿ ಸಮಾಜ ತೋರಿದ ದಾರಿ ತಾನೂ ನಡೆಯಬೇಕು. ಅವರಿಗಾಗಿ ನಿರ್ಮಿತ ವಾದ ಕೆರೆ-ಭಾವಿಗಳ ಆಶ್ರಯ ಪಡೆಯಬೇಕು. ಅಲ್ಲಿಗೆ ಸುಖದ ಬಾಳು ಮುಗಿಯಿತು.

ಅದು ಸಾಧ್ಯವಿಲ್ಲ. ಮೂರು ದಿನದ ಸುಖಕ್ಕಾಗಿ ತಾನು ಈ ದಾರಿ ಹಿಡಿಯಬೇಕಾಗಿತ್ತೇ? ತನ್ನ ವಂಶಕ್ಕೇ ಕಳಂಕ ತಂದು, ತಂದೆಯ ಮನಸ್ಸ ನ್ನೋಯಿಸಿ, ಅವರ ಶಾಪಕ್ಕೆ ಗುರಿಯಾಗಿ ಬಾಳಬೇಕಾಯಿತೇ? ಧರ್ಮ-ಸಮಾಜ-ಸಂಸಾರ ಎಲ್ಲ ದೃಷ್ಟಿಯಿಂದಲೂ ಕೆಟ್ಟು ಹೋಗಿದ್ದೇನೆ. ಸುಖ ಪಡಲೇಬೇಕು; ಅದಕ್ಕಾಗಿ ಉಳಿಯಲೇ ಬೇಕು. ತನ್ನ ಜೀವನದಲ್ಲಿ ದುಃಖ, ಸಂಕಟಗಳೇನೂ ಹೊಸದಲ್ಲ. ಹಿಂದೆ ಎಷ್ಟೋ ಬಂದಿವೆ. ಮುಂದೆಯೂ ಬರಲಿ. ಗರ್ಭವತಿಯಾದರೆ . . . . . ನಿಜ! ನೋಬೀನ ಹಾಗೆ ಆಗಿಲ್ಲವೇನು? ಅವಳ ಸಲಹೆ ಕೇಳಿದರಾಯಿತು. ಮನೆ, ಸಮಾಜ ಗಳನ್ನು ಬಿಡಬೇಕಾದರೆ—ಹಾಗೂ ಇರಲಿ. ದೂರ ಎಲ್ಲೋ ನಡೆದುಬಿಡು ತ್ತೇನೆ. ಅಂತೋನಿ ಜತೆಗಿದ್ದರೆ ಸಾಕು.

ಹೊಸ ಉತ್ಸಾಹದಿಂದೆದ್ದು ಮನೆಕೆಲಸಕ್ಕೆ ನಡೆದಳು ಬಾಗಿ. ಮಗು ವನ್ನೆತ್ತಿ ಮುದ್ದಾಡಿದಳು. ಅದಕ್ಕೆ ಹೊಸ ಅಂಗಿ ತೊಡಿಸಿ ಕುಣಿಸಿದಳು. ಅದರ ಕೈಗೆ ಒಂದು ತುಂಡು ಬೆಲ್ಲ ಕೊಟ್ಟು ಅತ್ಯಂತ ಉತ್ಸಾಹದಿಂದ ಮನೆಕೆಲಸಗಳಲ್ಲಿ ಮಗ್ನಳಾದಳು.

ಆಗಲೇ ರಾಮಯ್ಯ ತನ್ನ ವಿಚಾರಣೆ ಆರಂಭಿಸಿದರು. ಇನ್ನೊಮ್ಮೆ ಬಿರುಗಾಳಿ, ಜಡಿಮಳೆ, ಮನೆಯೊಳಗೆ ಸುಳಿಯಿತು. ಬಾಗಿಯ ಹೃದಯ ಜರ್ಝರಿತವಾಯಿತು.

ಎಷ್ಟೋ ಬಿಗಿಯಾಗಿತ್ತು ಆ ಬಿಸಿಲು? ಬೆಳಕು-ಥಳಕು ಇನ್ನೂ ಬೆಳೆಯುತ್ತಿತ್ತು. ಅದಕ್ಕೆ ಕಾರಣ ಸೂರ್ಯನ ಉತ್ಸಾಹವಲ್ಲ—ಅವ ನನ್ನು ಮುಚ್ಚಲು ಓಡಿಯೋಡಿ ಬರುತ್ತಿದ್ದ ಮೋಡ ಎಂದು ಯಾರಿಗೆ

ತಿಳಿಯಬೇಕು? ಮೇಲೆ ನೋಡಿದರಲ್ಲವೆ?

ಎಲ್ಲಿಲ್ಲದ ಕಾರ್ಮೋಡಗಳು ವೇಗವಾಗಿ ಓಡಿ ಬಂದು ಆಗಸವನ್ನು ಮುಚ್ಚಿಕೊಂಡವು. ಬೆಳಕು ಬೆಳೆಯುತ್ತ ಕುಂದಿತು. ಬಿಸಿಲು ಏರುತ್ತ ಗಾಳಿಯನ್ನು ಸ್ವಾಗತಿಸಿತು. ಕೆಲ ಗಳಿಗೆಗಳ ವರೆಗೆ ಮಳೆ ನಲ್ಲಿಯ ನೀರಿನಂತಹ ಹನಿ ಹೊತ್ತು ಬಂತು. ಧೂಳು ತುಂಬಿದ ಬೀದಿಗಳಲ್ಲೆಲ್ಲ ಕೆಂಪು ನೀರು ಹರಿಯಿತು. ಕೆಂಪಾದ ಹಸುರೆಲೆಗಳು ಪುನಃ ಹಸುರು ಬಣ್ಣ ತಾಳಿದುವು. ಕಾರ್ಮೋಡ, ಜಡಿಮಳೆ, ಬಿರುಗಾಳಿ ಈಗ ಇಲ್ಲ–ಈಗ ಇತ್ತು ಎನ್ನುವಷ್ಟರಲ್ಲಿ ಮಾಯವಾದುವು. ಇನ್ನೊಮ್ಮೆ ಬಿಸಿಲು–ತಂಪುಗಾಳಿ–ಶಾಂತವಾತಾವರಣ.

ರಾಮಯ್ಯನ ಕ್ರೋಧವನ್ನೆಲ್ಲ ಅವರ ಕಣ್ಣೀರು ಕೊಚ್ಚಿಕೊಂಡು ಹೋಯಿತು. ಬಾಗಿಯ ರೋಷ ಅಳಿದು, ತಾನಾಡಿದ ಮಾತುಗಳಿಗಾಗಿ ಅವಳಿಗೇ ತುಂಬ ಬೇಸರವಾಯಿತು. ತನ್ನ ತಂದೆಯ ಮಾತಿಗೆ ಇದಿರಾಡಿದ್ದು ತಪ್ಪು—ಎಂದವಳು ನೊಂದುಕೊಂಡಳು. ತನ್ನ ಜೀವನದಲ್ಲಿ ತಾನು ಕಂಡ ಹತ್ತಾರು ಸಂಸಾರಚಿತ್ರಗಳ ಕತೆಗಳನ್ನು ನೆನೆದು ರಾಮಯ್ಯ ತನ್ನ ಉದ್ವಿಗ್ನ ಮನಸ್ಸಿಗೆ ಶಾಂತಿ ತಂದು ಕೊಂಡರು. ಅವರ ಗಮನ ರಾಮಾಯಣದೆಡೆ ಹರಿದು, ಗಟ್ಟಿಯಾಗಿ ಅದನ್ನೋದುತ್ತ ಕುಳಿತುಕೊಂಡರು. ಪಂಚವಟಿಯ ಕತೆ ಅವರಿಗೆ ತುಂಬ ನೆಮ್ಮದಿಯನ್ನು ಅಂದು ತಂದುಕೊಟ್ಟಿತು.

ಉದ್ವಿಗ್ನತೆಯಿಂದ ದುಃಖದಿಂದ ಕೆಚ್ಚಿನಿಂದ ಕೆಂಪಾದ ಮುಖ ಬಿಸಿಯಾದ ಮೈ ಹಾಗೆ ತಣ್ಣಗಾದುವು ಬಾಗಿ ಮುಖ ಒರಸಿಕೊಂಡು ಮೆಲ್ಲನೆ ಎದ್ದಳು. ಹಾಯಾಗಿ ಮಲಗಿದ್ದ ತನ್ನ ಕಂದನ ಮುಖವನ್ನು ನೋಡುತ್ತ ನಿಂತುಕೊಂಡಳು. ಅವಳ ಹೃದಯ ತಣಿಯಿತು. ಮನಸ್ಸು ಹಿಡಿತಕ್ಕೆ ಬಾಗಿತು. ಮಗುವಿನ ಹಾಸಿನ ಒಳಿ ಕುಳಿತು ಬಾಗಿ ಅದರ ಮುಖವನ್ನೊಮ್ಮೆ ಚುಂಬಿಸಿದಳು ಎದ್ದು ನಿಂತು ತನ್ನಲ್ಲಿ ತಾನೇ ಧೈರ್ಯ ತುಂಬಿಕೊಂಡು ಬಚ್ಚಲ ಮನೆಗೆ ನಡೆದಳು. ಮುಖ ತೊಳೆದುಕೊಂಡು ಎಲ್ಲ ಮರೆತವಳಂತೆ ಮನೆಕೆಲಸದಲ್ಲಿ ತೊಡಗಿದಳು. ರಾಮಯ್ಯನವರು ಓದುತ್ತಿದ್ದ ವೇಗ ಬಿರುಸಾದಂತೆ ಅವಳ ಚಟುವಟಿಕೆ ಚುರುಕಾಗುತ್ತಿತ್ತು.

ಸಂಜೆಯಾಗುತ್ತ ಬಂದಂತೆ ಕಳೆದ ಎಲ್ಲ ಮಹಾಯುದ್ಧಗಳ ಮರವೆ

ಅವಳಿಗಾಯಿತು. ಬಿಸಿಲಿನ ಕಾವು ಇಳಿದಂತೆ ಮನದ ಕಾವು ಇಳಿಯು ತ್ತಿತ್ತು. ಸೂರ್ಯ ಇನ್ನು ಸಾಕು ಈ ದಿನದ ದುಡಿತ ಎಂದು ಮರೆ ಯಾದ. ಬಾಗಿಯ ಮನ ಕಳೆದ ದೃಶ್ಯವನ್ನೆಲ್ಲ ಮರೆತು ಹೊಸ ದೃಶ್ಯದೆಡೆ ಹಾತೊರೆಯುತ್ತಿತ್ತು.

ಕೈಕಾಲು ತೊಳೆದುಕೊಂಡು ರಾಮಯ್ಯ ತನ್ನ ಸಂಧ್ಯಾವಂದನೆಗೆ ಕುಳಿತರು. ಬಾಗಿ ತನ್ನ ಮುದ್ದಿನ ಮಗುವನ್ನೆತ್ತಿ ಆಡಿಸುತ್ತ ಮುಚ್ಚಂಜಿ ಮುಗಿಸಿದಳು. ಆ ದಿನ ಎಷ್ಟು ಬೇಗ ಮುಗಿದು ಹೋಯಿತೋ ಯಾರಿಗೂ ತಿಳಿಯಲಿಲ್ಲ. ತಾಸು ಎಂಟಾಗಿ ಹೋಯಿತು—ಉದ್ವೇಗದಿಂದ ಮುನ್ನಡೆ ಯುತ್ತಿದೆ ತಾಸಿನ ಮುಳ್ಳು. ಸಂಧ್ಯಾವಂದನೆಯಾಯಿತು, ವಿಷ್ಣು ಸಹಸ್ರ ನಾಮ ಮುಗಿಯಿತು, ರಾಮನಾಮದ ಪಾರಾಯಣವೂ ಆಯಿತು. ರಾಮಯ್ಯ ಭಜಗೋವಿಂದ ಸ್ತುತಿಯನ್ನು ಮನದಲ್ಲಿ ನುಡಿಯುತ್ತ ಊಟ ಕ್ಕೆದ್ದರು. ಬಾಗಿ ತನ್ನ ಮನತುಂಬ, ಮೊಗತುಂಬ ದೀನಭಾವವನ್ನು ತುಂಬಿಕೊಂಡು ಅತ್ಯಂತ ಪ್ರೇಮವನ್ನು ಚೆಲ್ಲುತ್ತ ತಂದೆಗೆ ಬಡಿಸಿದಳು. ಸಾರಿಗೆ ಉಪ್ಪು ಸಾಕೇ? ಚಟ್ನಿ ಹೇಗಿದೆ? ಇಂದು ಹಾಲೇ ಚೆನ್ನಾಗಿಲ್ಲ— ಎಂದು ತಾನೇ ತಾನಾಗಿ ಮಾತನಾಡುತ್ತ ಇಕ್ಕುತ್ತಿದ್ದಳು. ರಾಮಯ್ಯ ಧ್ಯಾನಪೂರ್ಣ ಭಾವದಿಂದ ಆಗಾಗ "ಹ್ಞೂ . . . . . ಆ . . . . . ಹ್ಞಾ" ಎಂದಷ್ಟೇ ಉತ್ತರವೀಯುತ್ತ ಉಣ್ಣುತ್ತಿದ್ದರು. ಮಗಳ ಆದರ ಹೆಚ್ಚು ಹೆಚ್ಚು ಉಣ್ಣು ಎಂದು ಸೂಚಿಸುತ್ತಿದ್ದರೂ ಅವರ ಮನದಲ್ಲಿ ಆಟವಾಡು ವಾಡುತ್ತಿದ್ದ ಭಾವನೆಗಳು ಗಂಟಲನ್ನು ಹಿಡಿಯುತ್ತಿದ್ದುವು ಹಾಗೂ ಹೀಗೂ ಊಟದ ಶಾಸ್ತ್ರ ಮುಗಿಸಿ ಎದ್ದರು. "ನೀನು ಊಟವನ್ನೇ ಮಾಡ ಲಿಲ್ಲ" ಎಂದು ಬಾಗಿ ತಂದೆಯನ್ನು ಉಪಚರಿಸಿದಳು.

ರಾಮಯ್ಯ ಉಣ್ಣುವಾಗಲೇ ನಿದ್ರೆಯನ್ನು ಆಹ್ವಾನಿಸುವಂತಹರು. ಉಂಡು, ಎಲೆಅಡಿಕೆ ಮೆಲ್ಲುವುದೊಂದೇ ತಡ. ಹಾಸಿಗೆಯನ್ನು ಆಶ್ರಯಿ ಸಲೇ ಬೇಕು. ಬಾಗಿ ರಾಮಯ್ಯ ಎದ್ದೊಡನೆಯೇ ವೀಳ್ಯದ ತಟ್ಟೆ ಸಿದ್ಧ ಪಡಿಸಿ ಅವರ ಹಾಸಿಗೆ ಹಾಸಲು ತೆರಳಿದಳು. ಹಾಸು ಹಾಸಿ—ತನ್ನ ಕೆಲ ಸಕ್ಕೆ ಹಿಂತಿರುಗಿದಳು. ಮಗು ಕಿಟ್ಟುವಿನ ಊಟವೂ ಆಯಿತು. ತಾನೂ ಉಂಡು, ಅಡಿಗೆ ಪಾತ್ರೆಗಳನ್ನು ತೊಳೆಯಲು ಭಾವಿಕಟ್ಟೆಗೆ ನಡೆದಳು. ಮಿಣಮಿಣ ಉರಿಯುತ್ತಿದ್ದ ದೀಪ ಮನೆಯ ಮೆಟ್ಟಿಲ ಮೇಲೆ ಕುಳಿತು

ಬೆಳಕು ಕೊಡುತ್ತಿತ್ತು. ರಾಮಯ್ಯ ಕಿಟ್ಟುವನ್ನೆತ್ತಿ ತೊಡೆಯ ಮೇಲಿರಿಸಿ ಕೊಂಡು ಹಾಸಿಗೆಯಲ್ಲಿ ಕುಳಿತರು. ವೀಳ್ಯ ಜಗಿಯುತ್ತ ಮಗುವನ್ನಾಟ ವಾಡಿಸುತ್ತಿದ್ದರು.

ಬಾಗಿ ಪಾತ್ರೆಗಳನ್ನೆಲ್ಲ ತೊಳೆದು, ಅಡಿಗೆಮನೆಯನ್ನೂ ಶುದ್ಧಗೊಳಿಸಿ ಬರುವಾಗ ತಂದೆಯೂ ಮಗುವೂ ನಿದ್ರಿಸಿದ್ದರು. ಅಲ್ಲೇ ಉರಿಯುತ್ತಿದ್ದ ದೀಪವನ್ನಾರಿಸಿದಳು ಬಾಗಿ ಅಡಿಗೆ ಮನೆಗೆ ಪುನಃ ನಡೆದು ಅಲ್ಲಿನ ದೀಪದ ಬೆಳಕಿನಲ್ಲಿ ತನ್ನ ಹಾಸು ಹಾಸಿಕೊಂಡಳು. ಆದರೂ ನಿದ್ರಿಸುವ ಮನಸ್ಸಿಲ್ಲ. ಆ ದೀಪವನ್ನೂ ಆರಿಸಿ ಮನೆಯ ಹಿಂದಿನ ಬಾಗಿಲಲ್ಲಿ ಕುಳಿತಳು. ಸಾವಿರ ಯೋಚನೆಗಳು ಅವಳ ತಲೆಯಲ್ಲಿ ಬಯಲಾಟವಾಡುತ್ತಿದ್ದುವು. ವಿವಿಧ ಆವೇಶಗಳ ಚಿತ್ರ ಸುಳಿಯುತ್ತಿತ್ತು. ತನ್ನ ಸಮಸ್ಯೆಗಳಿಗೆ ಉತ್ತರ ಕಂಡು ಕೊಳ್ಳಲು ಯತ್ನಿಸಿದಷ್ಟಕ್ಕೂ ವಿಫಲವಾಗುತ್ತಿತ್ತು ಅವಳ ಯತ್ನ.

ತರಗಲೆಯ ಸದ್ದು ಅವಳನ್ನೆಚ್ಚರಿಸಿತು. ಯಾರೋ ಬಂದರೆಂದು ಆಕೆ ಮೆಲ್ಲನೆ ಎದ್ದು ಅಂಗಳಕ್ಕೆ ಕಾಲಿಟ್ಟಳು. ಸುತ್ತಲೂ ಆಶಾದೃಷ್ಟಿ ಯನ್ನು ಬೀರಿದಳು. ಆದರೂ ಯಾರ ಸುಳಿವೂ ಇಲ್ಲ. ಗಾಳಿ ತಂಪಾಗಿ ಮಂದವಾಗಿ ಬೀಸುತ್ತಿತ್ತು. ಅಲ್ಲೊಂದು ಇಲ್ಲೊಂದು ಮಿಣುಕು ಹುಳ ಗಳು "ತನ್ನಿಂದಲೇ ಜಗತ್ತಿಗೆ ಬೆಳಕು" ಎಂದು ಹಾರಾಡುತ್ತಿದ್ದುವು. ಬಾವಿ ಯ ಹಿಂಗಡೆಯಿಂದ ಹಾದು ನಾಯಿಯೋ ಬೆಕ್ಕೋ ಓಡಿಹೋಯಿತು. ಬಾಗಿ ನಿರಾಶಳಾಗಿ ಮನೆಯ ಬಾಗಿಲ ಮೆಟ್ಟಿಲ ಮೇಲೆ ಕುಳಿತಳು. ನಿರಾಶೆ ಅವಳ ಮನ ನೇರಲು ಯತ್ನಿಸುತ್ತಿತ್ತು. ಆದರೆ, ಆ ತಂಗಾಳಿ ಹೊಸ ಉತ್ಸಾಹ ಹುಟ್ಟಿಸಲು ಚಾಮರ ಬೀಸುತ್ತಿತ್ತು. ಇನ್ನೂ ಅರ್ಧ ತಾಸಾ ಯಿತೋ ಏನೋ?

ಪುನಃ ತರಗೆಲೆ ಸದ್ದು. ಕಾಲ ಸಪ್ಪಳು.

ಬಾಗಿ ಕಣ್ಣೊರಸಿಕೊಂಡು ವಿಶಾಲದೃಷ್ಟಿ ಬೀರಿದಳು. ಯಾರೋ ಬಂದಂತಿತ್ತು. ಒಳಗಿನ ದನಿಯಲ್ಲಿ, ಆಶಾಪೂರಿತ ಭಾವದಲ್ಲಿ ಬಾಗಿ ಮೆಲ್ಲನೆ ಕೂಗಿದಳು. ಅವಳ ದೃಷ್ಟಿಯ ಹಿಂದೆ ಅವಳ ದೇಹ ಚಲಿಸುತ್ತಿತ್ತು. ಅಂಗಳಕ್ಕಿಳಿದು ಭಾವಿಕಟ್ಟೆ ಬಳಿಗೆ ಆಕೆ ಆಗಲೇ ನಡೆದಿದ್ದಳು.

"ಅಂತೋನಿ . .

"ಹ್ಞಾ . . .

ಬಾಗಿಗೆ ಮುಂಪೆ ಮಾತೇ ಹೊರಡದಾಯಿತು. ಆ ದಿನದ ಚಿತ್ರವೆಲ್ಲ ಒವ್ಮೊಂದೊವ್ಮೆ ಅವಳ ಮುಂದೆ ನಿಂತು ಆಕೆ ಮೂಕಳಾದಳು. ಅಂತೋನಿ ಅವಳ ವೈದಡವಿದ. ಆದರೂ ಅವಳ ಮಾತಿಲ್ಲ. ಮೆಲ್ಲನೆ ಕರೆದೊಯ್ದು ಭಾವಿಯ ಪಕ್ಕದಲ್ಲಿ ಕಲ್ಲಿನ ಮೇಲೆ ಕುಳ್ಳಿರಿಸಿದ. ಆದರೆ . . . . ಬಾಗಿ ಅಳುತ್ತಿದ್ದಳು.

ಅವಳನ್ನು ಸಂತೈಸಲೆತ್ನಿಸಿದ ಅಂತೋನಿ.

"ಯಾಕೆ? ಏನಾಯಿತು" ಎಂದ.

ಬಾಗಿ ತಲೆ ಎತ್ತಿ ಆಶಾದೃಷ್ಟಿಯಿಂದ ಅಂತೋನಿಯ ಮುಖವನ್ನೇ ನೋಡಿದಳು. ಗಂಟಲನ್ನು ಬತ್ತಿ ಬರುತ್ತಿದ್ದ ದುಃಖವನ್ನು ತಡೆದಳು.

"ನನ್ನನ್ನೂ ನಿಮ್ಮ ಜಾತಿಗೆ ಸೇರಿಸಿಕೊಳ್ಳುತ್ತೀರಾ?"

"ಯಾಕೆ? ಯಾರು ಬೇಕಾದರೂ ನಮ್ಮ ಜಾತಿಗೆ ಸೇರಬಹುದು."

"ನಾನೂ . . . . ."

"ಹ್ಞಾ . . . . . ನೀನೂ . . . . ."

"ನಾ ನಿಮ್ಮ ಜಾತಿಗೆ ಸೇರುತ್ತೇನೆ"

"ಆಗಲಿ . . . . ಅದಕ್ಕೆ ಅಳಬೇಕೆ?"

"ನನ್ನ ಕೈಬಿಡಲಾರದು"

" . . . . . "

"ನನ್ನನ್ನು ಒದುಕಿಸಿರಿ. ನಾನೀ ಮನೆಯಲ್ಲಿ ನಿಲ್ಲಲಾರೆ . . . ."

" . . . . . "

"ನನ್ನನ್ನು ಉಳಿಸುತ್ತೀರಾ?"

"ಯಾಕೆ ಬಾಗಿ ಈ ಎಲ್ಲ ಮಾತು?"

"ಹಾಗಾಯಿತು ನನ್ನ ಗತಿ. ನನಗೆ ಯಾರೂ ದಿಕ್ಕಿಲ್ಲ. ಭಾವಿ-ಕೆರೆ ಅಷ್ಟೆ"

"ಹಾಗೆನ್ನ ಬೇಡ"

"ನನ್ನ ಕೈ ಬಿಡುವುದಿಲ್ಲವಷ್ಟೆ?"

"ಇಲ್ಲ ಬಾಗಿ . . . "

"ನಿಮ್ಮ ದೇವರಾಣೆ"

"ನನ್ನ ದೇವರಾಣೆ"

"ಮದುವೆಯಾಗುತ್ತೀರಾ"

"ಆಗಲೇ ಆಗಿದ್ದೇನೆ ತಾನೆ . . . . . "

"ಇಲ್ಲ . . . . ನನ್ನನ್ನು ಉಳಿಸಬೇಕು . . . . "

"ಯಾಕೆ ಏನಾಯಿತು?"

ಬಾಗಿ ಒಳದನಿಯಲ್ಲೇ—ಸೂಕ್ಷ್ಮವಾಗಿ ಅಂದು ನಡೆದುದೆಲ್ಲವನ್ನೂ ತಿಳಿಸಿದಳು.

ಬಾಗಿ ಬ್ರಾಹ್ಮಣರ ಹೆಣ್ಣು; ಮೇಲ್ಜಾತಿಯವಳು ಎಂಬ ಭಾವ ಹಳ್ಳಿಯಲ್ಲೇ ಹುಟ್ಟಿ ಬೆಳೆದ ಅಂತೋನಿಯ ಮನದಿಂದ ಮಾಯವಾಗಿರಲಿಲ್ಲ. ಆದರೆ ಆಕೆಯ ಪ್ರೇಮಪಾಶಕ್ಕೆ ಆತ ಸಿಕ್ಕುಬಿದ್ದಿದ್ದಾನೆ. ಅವಳನ್ನು ನೋಡಿದಾಗಲೆಲ್ಲ ಅವನ ಮನದಲ್ಲಿ ತಾನು ಮಾಡುವುದು ನ್ಯಾಯವಲ್ಲ ಎಂಬ ಭಾವನೆ ಹೊಳೆದು ಎಚ್ಚರಿಸಿ ಮಾಯವಾಗುತ್ತಿತ್ತು. ಏಕವಚನದಲ್ಲಿ ಕರೆಯಬೇಕೆಂದು ಬಾಗಿ ಎಷ್ಟು ಬಾರಿ ಅವನಿಗೆ ತಿಳಿಸಿಲ್ಲ. ಆದರೂ ರಕ್ತಗತವಾದ ಅವನ ಗುಣ ಅವನಿಗೆ ಅಡ್ಡವಾಗಿ—ಬಹುವಚನ ಮುಂದೆ ಬರುತ್ತಿತ್ತು.

ಅವಳ ಕತೆ ಕೇಳುತ್ತಿದ್ದಂತೆ ಮಾತಿನ ಹಿಂದೆ ಅಡಗಿದ್ದ ಪ್ರೇಮ ಅವನನ್ನು ಬಂಧಿಸುತ್ತಿತ್ತು. ಅವಳು ಹಿಂದೆ ಹೇಳಿದ್ದ ಮಾತು ನಿಜ. ತನ್ನ ಜಾತಿ ಕುಲಗಳನ್ನೆಲ್ಲ ಬಿಟ್ಟು ಬರಲು ಸಿದ್ಧಳಿದ್ದಾಳೆ ಎನಿಸುತ್ತಿತ್ತು. ಆದರೆ . . . . . ಆಕೆ ತನ್ನ ಜಾತಿಗೆ ಸೇರಿದಳೆಂದರೆ ತಾನು ಈ ಊರಲ್ಲಿರುವುದು; ತನ್ನ ಆಜೀವ ಗೆಳೆಯರಿಗೆ ಮುಖ ತೋರಿಸುವುದು ಸಾಧ್ಯವೇ. ತನ್ನ ಜಾತಿಯವರೇನೋ ಅಡ್ಡಿ ತರಲಾರರು ನಿಜ. ಜಾತಿಯಲ್ಲಿ, ಒಬ್ಬ ಪರಜಾತಿಯ ವ್ಯಕ್ತಿಯನ್ನು ಸೇರಿಸಿಕೊಳ್ಳುವುದು ಸ್ವರ್ಗಕ್ಕೆ ಹತ್ತಿರವಾದಂತೆ. ಒಬ್ಬ ಹಿಂದೂವನ್ನು ಕ್ರೈಸ್ತಳಾಗಿ ಮಾಡಿದೆನೆಂದು ಧರ್ಮಗುರುಗಳೂ ಬೆನ್ನು ತಟ್ಟದಿರಲಾರರು.

ಆದರೆ. . . . ಎಲ್ಲೋ ಸಂಧಿಸಿ ಕೆಲ ಗಳಿಗೆ ಸುಖಿಸಿ, ಮುನ್ನಡೆಯುವ ಪ್ರಕೃತಿ ಅವನದಲ್ಲ. ಅವಳಾಗೇ ಬಂದಿದ್ದಾಳೆ, ಈಗ ಅಂತೋನಿಯ ಹೊಣೆಗಾರಿಕೆಯೇನೂ ಇಲ್ಲ. ಆತ ಅವಳನ್ನು ನಂಬಿಸಿ ಹಾಳು ಮಾಡಿಲ್ಲ. ಅವನ ಮೇಲೆ ಅವಳೇ ಅತ್ಯಾಚಾರ ನಡೆಸಿದ್ದಾಳೆ; ಆ ಆಕ್ರಮಣ ಆನಂದವೆನ್ನಿಸುವಂತೆ ಅವನ ಮನ ಸೆಳೆದಿದ್ದಾಳೆ. ಆದರೆ; ಬಾಗಿಯ ಅಮರ

ಪ್ರೇಮ, ದೀನ ಭಾವ ನೋಡಿದಾಗಲೆಲ್ಲ ಅಂತೋನಿಯ ಹೃದಯ ಅವಳ ಅಂಗೈನೆಲ್ಲಿಕಾಯಿಯಾಗುತ್ತಿತ್ತು. ತನ್ನನ್ನೇ ಪರದೈವವೆಂದು ತಿಳಿದು, ತನಗೆ ಸೋತ ಹೆಣ್ಣಿಗೆ ಮೋಸಮಾಡಬಾರದೆಂದು ಧರ್ಮದ ವಾತಾವರಣ ದಲ್ಲಿ ಬೆಳೆದ ಅವನ ಹೃದಯ ಎಚ್ಚರಿಸುತ್ತಿತ್ತು.

ಆರು ತಿಂಗಳಾಗಿತ್ತು ಬಾಗಿ ಅವನ ಸೌಹಾರ್ದಗಳಿಸಿ, ಹೃದಯ ಸೂರೆಗೊಂಡು. ಆಗಲೇ ತನ್ನ ಸರ್ವಸ್ವವನ್ನೂ ಇವನ ಪಾದತಲದಲ್ಲಿ ಆಕೆ ಅರ್ಪಿಸಿದ್ದಾಳೆ. ನನ್ನನ್ನು ನಿನ್ನವಳನ್ನಾಗಿ ಮಾಡಿಕೊಳ್ಳು; ಕೈಬಿಡ ಬೇಡ ಎಂದು ಅನೇಕ ಬಾರಿ ಬೇಡಿಕೊಂಡಿದ್ದಾಳೆ. ನಿನ್ನ ಜಾತಿಯನ್ನೇ ನೀ ಬಿಡಬೇಕಾಗುತ್ತೆ ಎಂದಾಗ ಒಮ್ಮೊಮ್ಮೆ ತಬ್ಬಿಬ್ಬಾದರೂ ಮುಂದೆ ನಿರ್ಧ ರಿಸಿ ಆಗಲಿ ಎಂದು ಒಪ್ಪಿದ್ದಾಳೆ. ಅವಳ ಸುಖಕ್ಕೆ, ಸಂತೋಷಕ್ಕೆ ಅಡ್ಡಿ ಬರುವ ಜಾತಿಯನ್ನು ಅವಳು ಬಿಡುವುದರಲ್ಲಿ ಅರ್ಥವಿದೆ; ಜಾತಿ ಕೆಟ್ಟರೂ ಸುಖ ಪಡಬೇಕು ಮನುಷ್ಯ—ಎಂದು ಅಂತೋನಿಗೆ ತೋರಿತ್ತು; ಬಾಗಿಗೂ ಹಾಗೇ ಅನಿಸಿತ್ತು.

ತನ್ನ ಜಾತಿಯಲ್ಲಿ ಇವಳನ್ನು ವಿಚಾರಿಸುವ ತರುಣಿಯರೆಷ್ಟಿಲ್ಲ? ಲಂಗ ಧರಿಸಿ, ಪಾಶ್ಚಾತ್ಯ ಉಡಿಗೆಯಿಂದ ಆಗಲೇ ಪರದೇಶಗಳಿಂದ ಇಳಿದು ಬಂದ ವರಂತೆ ಮೆರೆವ ಎಷ್ಟು ಮಂದಿಯಿಲ್ಲ ತಾವೇ ವರದಕ್ಷಿಣೆ ಸಂಗ್ರಹಿಸಿ, ಅದು ಸಿದ್ಧವಾಗುವವರೆಗೂ ವಿವಾಹವಾಗದೆ, ಸಾಕಷ್ಟು ಹಣ ಸಿದ್ಧವಾ ದೊಡನೆ ಗಂಡನನ್ನು ಕೊಂಡುಕೊಳ್ಳುವ ತರುಣಿಯರಿದ್ದಾರೆ. ಹಣವಿಲ್ಲದೆ, ಸಂಗ್ರಹಿಸಿದ್ದೆಲ್ಲ ಜೀವನ ನಿರ್ವಹಣಕ್ಕೆ ಸಾಕಾಗದೇ ಅವಿವಾಹಿತರಾಗೇ ಉಳಿದವರಿದ್ದಾರೆ. ಹಣಗೂಡಿಸುವ ಸಾಹಸದಲ್ಲಿ ಮುನ್ನಡೆಯುತ್ತಿದ್ದಂತೆ ಬೇರೆ ವಿವಾಹವೊಂದು ಬೇಕಾಗಿಲ್ಲ ಎಂತ ತಿಳಿದು ಒಂಟಿಬಾಳು ಬಾಳುವವ ರಿಗೂ ಕಡಿಮೆಯಿಲ್ಲ. ಹೆಣ್ಣಿನ ಹಣಕ್ಕೆ ಬಾಯಿಬಿಟ್ಟು, ಅವಳು ಕೊಳ್ಳುವ ವಸ್ತುವಾಗಿ, ಅವಳ ಅಡಿಯಾಳಾಗಿ ಬಾಳುವ ಜೀವನದೊಡನೆ—ಬಾಗಿಯ ಅನಂತ ಅಭಿಮಾನವನ್ನು ತೂಗಿನೋಡುತ್ತಿದ್ದಂತೆ ತನ್ನವರ ಬಗ್ಗೆ ಅಂತೋ ನಿಗೆ ಜುಗುಪ್ಸೆ ಮೂಡುತ್ತದೆ; ಬಾಗಿಯ ಮೇಲಿನ ಪ್ರೇಮ ಅಧಿಕವಾಗುತ್ತದೆ.

ಹುಟ್ಟುವಾಗಲೇ ಕುಡಿತಕ್ಕೆ ಕಟ್ಟುಬಿದ್ದ ಅಂತೋನಿಗೆ ಹಣ ಬೇಡ ವೆಂದಲ್ಲ. ಆದರೆ, ಆ ಹಣ ಹೆಣ್ಣಿನ ದುಡಿತವಾಗಬಾರದು. ತಾನು ಬಡವ, ಕಷ್ಟ ಕಾಯಕದಿಂದ ಜೀವನ ನಿರ್ವಹಣ ಮಾಡುತ್ತಿದ್ದೇನೆ. ಈ

ಬಾಳಿನಲ್ಲಿ ತನಗೆ ಹೊರೆಯಾದ ಹೆಣ್ಣು ಬಂದರೆ? ಅವಳು ತರುವ ಹಣ ಸರಿಯಾಗಿ ಕುಡಿದರೆ ಆರು ತಿಂಗಳಿಗೂ ಸಾಲದು. ಆದರೆ ಬಾಳಿರುವ ವರೆಗೂ ಅವಳ ಅಡಿಯಾಳಾಗಿರಬೇಕು; ಅವಳ ಕೆಣಕಾಟ ಸಹಿಸಬೇಕು. ಮನೆಯಲ್ಲಿ ಹೆಣ್ಣಿನ ಆಳಾಗಿ, ಕೂಲಿಮಾಡುವಲ್ಲಿ ದನಿಯ ಸೇವಕನಾಗಿ ಬಾಳಬೇಕು. ತನ್ನ ಬಾಳಿನಲ್ಲಿ ತಲೆ ಎತ್ತಲು ಯಾವ ಎಡೆಯೂ ಇಲ್ಲ ವಾಗುತ್ತೆ. ಈ ದುರಂತ ಚಿತ್ರ ಅವನನ್ನು ನಡುಗಿಸಿತ್ತು. ಬಾಗಿ ತನ್ನ ಅಂಕೆಗೆ ಬಾಗಿದ ಹೆಣ್ಣು-ಅವಳ ಜತೆಗಿಂತ ಬೇರೆ ಬಾಳಿಲ್ಲ ಎಂದವನ ಗಂಡು ಹೃದಯ ಕೂಗಿ ಹೇಳುತ್ತಿತ್ತು.

ಈಗ ಎಲ್ಲಿಲ್ಲದ ಸಮಸ್ಯೆ ಅವನ ಮುಂದೆ ನಿಂತಿದೆ. ಈ ಪರಿಸ್ಥಿತಿ ಬರ ಬಹುದೆಂದು ಅವನಿಗೆ ಎಂದೋ ಅನಿಸಿತ್ತು. ಆದರೆ ಇಷ್ಟು ಬೇಗ; ಇಷ್ಟು ಆಕಸ್ಮಿಕವಾಗಿ ಬರಲಾರದೆಂದಿದ್ದ. ಒಂದು ಹೆಣ್ಣು ತನಗೊಪ್ಪಿದವನೊಡನೆ ಆನಂದದಿಂದ ಕಾಲಕಳೆದರೆ ಅವನ ಜಾತಿ ಅದಕ್ಕೆ ಅಡ್ಡಿ ಬಂದ ಉದಾ ಹರಣೆ ಅಷ್ಟಿಲ್ಲ: ಆ ನೀತಿಯೆಲ್ಲ ಇಟಲಿ-ಇಂಗ್ಲಾಂಡುಗಳ ನಾಗರಿಕತೆ ಯಾಗಿದೆ ಅವನ ಸಮಾಜವಲ್ಲಿ. ಹೆಣ್ಣು ದಾರಿ ತಪ್ಪಿದ ಪ್ರತೀಕವಾಗಿ ತಾಯ್ತನದ ದಾರಿ ಹಿಡಿದರೂ ಅದು ಬೆಳಕಿಗೇ ಬರುತ್ತಿಲ್ಲ. ಈ ಹಿಂದೂ ಧರ್ಮಕ್ಕೆ ವಿವೇಚನೆಯಿಲ್ಲ, ತಾಳ್ಮೆಯಿಲ್ಲ· ಕರುಣೆಯು ಕರುಳಿಲ್ಲ ಎನ್ನಿಸಿತು ಅವನಿಗೆ ಬಾಗಿಯ ದುರಂತ ಕಥೆ ಕೇಳಿ ಅವನೂ ಮರುಗಿದ. ಅವಳ ಕಣ್ಣ ಹನಿ ಒರಸಿ ಮೈದಡವಿ ತಬ್ಬಿ ಅಳಲನ್ನು ನೀಗಲು ಎಲ್ಲ ಬಗೆಯಿಂದ ಶ್ರಮಿಸಿದ. ಬಾಗಿ ಕತೆ ಮುಗಿಸಿದಳು. ಅಂತೋನಿಯನ್ನು ಬಿಗಿದಪ್ಪಿ ನನ್ನ ಕೈಬಿಡಬೇಡಿ ಎಂದು ಕೊನೆಯದಾಗಿ ಬೇಡಿಕೊಂಡಳು.

"ನೀನು ಎಂದೆಂದೂ ನನ್ನವಳು"

"ನಿಜವಾಗಿಯೂ . . . . . "

"ನಿಜಕ್ಕೂ ನಾ ನಿನ್ನನ್ನೇ ಮದುವೆಯಾಗುತ್ತೇನೆ"

"ನಿಮ್ಮೊಡನೆಯೇ ನಾನೂ ಬರುತ್ತೇನೆ"

"ಹಾಗೇ ಆಗಲಿ . . . . . "

ಬಾಗಿ ಉತ್ಸಾಹದಿಂದ ಮೈಮರೆತಳು. ಅಂತೋನಿಯ ಕೈಯ ಕೂಸಾಗಿ ಬಿಟ್ಟಳು!

# ನಾಲ್ಕು

ನಾಗರಮನೆ ವೆಂಕಟ್ರಾಯರು ಉಪ್ಪೂರಿನಲ್ಲೇ ದೊಡ್ಡ ಜಮೀನ್ದಾರರು. ಹಳ್ಳಿಯ ಜನರೆಲ್ಲ ಅವರನ್ನು ಶ್ಯಾನುಭಾಗರೆಂದೇ ಕರೆಯುತ್ತಾರೆ. ಗ್ರಾಮದ ಶ್ಯಾನುಭಾಗರಲ್ಲವಾದರೂ, ಶ್ಯಾನುಭಾಗನಾದವನು ತನ್ನ ಅಧಿಕಾರ ನಡೆಸಬೇಕಾದರೆ ಇವರ ಮನೆಯ ಚಾವಡಿಗೇ ಬರಬೇಕು. ಇಡಿಯ ಹಳ್ಳಿಯಲ್ಲಿ ಏನು ನಡೆಯಬೇಕಾದರೂ ರಾಯರ ಅಪ್ಪಣೆಯಾಗಬೇಕು; ಮೊದಲು ಅವರ ಅನುಮತಿಯಾಗಬೇಕು. ಬಯಲಾಟ, ಭೂತದ ಕೋಲ, ಮಾರಿಗುಡಿ ಪೂಜೆ, ಮದುವೆ ಅಥವಾ ಊರ ಶಿವ ದೇವಾಲಯದ ಜಾತ್ರೆಯೇ ಆದರೂ ಇವರ ಮುಂದೆಯೇ ಅದೆಲ್ಲ ಸಾಗಬೇಕು. ರಾಯರು ಬಯಲಾಟಕ್ಕೆ ಬಂದಿಲ್ಲ ಎಂದರೆ, ಭಾಗವತನಿಗೆ ಸ್ವರವೇ ಹೊರಡಲಾರದು. ವೇಷಧಾರಿಗಳ ಕುಣಿತ ಸೊಗಸದು. ಏನೋ ರಾಯರು ಬಂದಿಲ್ಲವೆಂದು ಕಾಣುತ್ತೆ, ಅದಕ್ಕೇ ಇರಬೇಕು ಬಣ್ಣದ ಮಾಲಿಂಗನ ವೇಷ ಸಪ್ಪೆಯಾಗಿದೆ ಎಂದು ಜನ ಆಡಿಕೊಳ್ಳುತ್ತಾರೆ.

ಹಳ್ಳಿಯ ಆ ಕಡೆಗೆ ಹೊಲೆಯರ ಕೇರಿ ಇದೆ. ಅದರ ಪಕ್ಕದ ಭೂತದ ಗುಡಿಯನ್ನು ನೀವು ನೋಡಿದ್ದೀರೋ ಗೊತ್ತಿಲ್ಲ. ಆ ಕಡೆ ಹೋದರೆ ನೋಡಬಹುದು. ಭೂತ ಕುಣಿಪವನು ವೇಷ ಹಾಕಿ ಪಾಡ್ದನ ಮುಗಿವವರೆಗೂ ಪ್ರಯತ್ನಿಸಿದರೂ ಕೂಡಾ ನಡುಕ ಬಂದಿಲ್ಲ ಎಂದರೆ ಸರಿ. ಮೊಕ್ತೇಸರರಿಗೆ ಆಗಲೇ ನಡುಕ ಹುಟ್ಟುತ್ತೆ. ಯಾರು? ರಾಯರೆಲ್ಲಿ—ಎಂದು ಕೂಗುತ್ತಾನೆ ಭೂತದ ವೇಷಧಾರಿ. ರಾಯರ ಸುಳಿವಿಲ್ಲೆಂದಾದರೆ ಅವನು ಕೈಯೆತ್ತಿಕೊಟ್ಟ ಎಳೆನೀರನ್ನು ರಾಯರ ಮನೆಗೊಯ್ದು ಅವರಿಂದ ಅದನ್ನು ಮುಟ್ಟಿಸಿ ಮೊಕ್ತೇಸರನಾದವನು ಬರಬೇಕು. ರಾಯರಿಲ್ಲವಾದಲ್ಲಿ ಅವರ ಸಂಬಂಧಿಕರಾರಾದರೂ ಮುಟ್ಟಬೇಕು. ಆ ಬಳಿಕವೇ ಆತನಿಗೆ ಆವೇಷ ಆರಂಭವಾಗುವುದು. ಇಲ್ಲವಾದರೆ ಮುಂದೆ ಭೂತ ಹಿಡಿಯುವುದೇ ನಿಲ್ಲಬಹುದೆಂಬ ಭೀತಿ ಅವನಿಗೆ.

ಹಳ್ಳಿಯಲ್ಲಿ ಬ್ರಾಹ್ಮಣರಿರಲಿ, ಇತರ ಜಮೀನುದಾರರಿರಲಿ, ಒಕ್ಕಲಿಗರಿರಲಿ—ಯಾರು ಯಾವ ಕೆಲಸ ಮಾಡಬೇಕಾದರೂ ರಾಯರ ಮುಂದೆ.

ಬಂದು, ನಮಸ್ಕರಿಸಿ, ಊರ ಸುದ್ದಿ ಮಾತನಾಡಿ, ಮೆಲ್ಲನೆ ಆ ಮಾತು ಈ ಮಾತು ಆಡುತ್ತಿದ್ದಂತೆ ತಾನು ಬಂದ ಉದ್ದೇಶವನ್ನೆತ್ತಿ ಅವರ ಅನುಮತಿ ಪಡೆಯಬೇಕು. ಅವರೂ ಇದಿರಾಡದಂತೆ ತಕ್ಕುದಾದ ಮಾತಿನ ಮಂಟಪ ಕಟ್ಟಿಕೊಳ್ಳಬೇಕು. ಅವರನ್ನು ಹೊಗಳಿ ಅಟ್ಟಕ್ಕೇರಿಸಬೇಕು. ಸರಿ! ಅನಿವಾರ್ಯ ಕಾರಣದಿಂದ ಯಾರಾದರೂ ಅವರ ಅಪ್ಪಣೆ ಪಡೆಯಲು ಮರೆತರೆಂದರೆ ಅಂತಹರ ಕಥೆ ಮುಗಿದಂತೆಯೇ. ಕೆಳ ಬೆಟ್ಟಿನ ಬೋರನಿಗಾದಂತೆ. ಅಂದರೆ, ಮನೆಮಠವನ್ನೆಲ್ಲ ಬಿಟ್ಟು ಊರಿಂದಲೇ ಹೊರಡಬೇಕಾಗುತ್ತೆ.

ವೆಂಕಟರಾಯರ ತಂದೆ ನಾರ್ಣಪ್ಪಯ್ಯ ತೀರಿಕೊಂಡಾಗ ರಾಯರಿಗೆ ಇನ್ನೂ ಹದಿನಾರು ವಯಸ್ಸು. ಅವರ ತಮ್ಮ ರಾಮುಗೆ ಹತ್ತು ವರ್ಷ. ತುಂಡು ಪಾಳೆಯಗಾರನಂತೆ ಮೆರೆದು, ಸಕಲ ಬಗೆಯ ಸುಖವನ್ನೂ ಕೀರ್ತಿಯನ್ನೂ ಅನುಭವಿಸಿದ ನಾರ್ಣಪ್ಪಯ್ಯ ಬಡವರಾಗಿ ಹುಟ್ಟಿದರೂ, ದೊಡ್ಡ ಜಮೀನ್ದಾರರಾಗಿ ಮಡಿದರು. ತನ್ನ ಕಾಲ ಆಗಿ ಹೋಯಿತೆಂಬ ಕಲ್ಪನೆ ಬಂದುದರಿಂದಲೋ ಅಥವಾ ತಾನು ತುಳಿದ ದಾರಿಯನ್ನು ತನ್ನ ಮಗ ತುಳಿಯಬಾರದೆಂದೋ ಏನೋ ನಾರ್ಣಪ್ಪಯ್ಯ ತನ್ನ ಮಗನಿಗೆ ಹದಿನೈದು ವರ್ಷವಾಗುವಾಗಲೇ ವಿವಾಹ ಮಾಡಿಸಿದರು. ಇಂತಹ ವಿವಾಹ ಸಂಭ್ರಮ ಇದುವರೆಗೆ ಎಲ್ಲೂ ನಡೆದಿಲ್ಲ ಎಂದು ತೋರಿಸಿ ಬಿಡುತ್ತೇನೆಂದು ಊರಿಗೆ ಸಾರಿದರು; ಹಾಗೇ ಮಾಡಿದರು.

ಉಡುಪಿಯಿಂದ ಆನೆಯನ್ನು ತರಿಸಿ ಅದರ ಮೇಲೆ ತನ್ನ ಮಗನನ್ನು ಕುಳ್ಳಿರಿಸಿ ದಿಬ್ಬಣ ಹೊರಡಿಸಿದರು. ದಾರಿಯುದ್ದಕ್ಕೂ ಬ್ಯಾಂಡ್, ಕೊಂಬು ಕಹಳೆಗಳ ವೈಭವ. ಬಿರುಸು ಆಕಾಶ ಬಾಣಗಳ ದೀಪಮಾಲೆ. ಮದುವೆಯ ಗಂಡು ಮನೆಗೆ ಹಿಂತಿರುಗಿದೊಡನೆ ಮದುವೆ ಮನೆಯ ಊಟವನ್ನೂ ಮೀರಿಸುವ ಔತಣ; ಎರಡು ಯಕ್ಷಗಾನ ಕೂಟದವರಿಂದ ಇದಿರಿದಿರಾಗಿ ಒಂದೇ ರಾತ್ರಿ ಬಯಲಾಟ. ಜತೆಗೆ, ಆಟ ಆರಂಭವಾಗುವವರೆಗೆ ಸಭಿಕರನ್ನು ಹರ್ಷಗೊಳಿಸಲು ಕುಂದಾಪುರದಿಂದ ವಿಶೇಷ ಆಹ್ವಾನದ ಮೇಲೆ ಬಂದ ದೇವದಾಸಿಯರ ನರ್ತನ. ನಡು ನಡುವೆ ಹಾಸ್ಯದ ಕಿಟ್ಟಣ್ಣನ ತುಂಡು ಹಾಸ್ಯ. ರಾಯರ ಆಶ್ರಯದಲ್ಲೇ ಬೆಳೆದ ಅವರ ಸೇವಕಳಾಗಿದ್ದ ದೇವದಾಸಿ ಅಮ್ಮನವರ ಸಂಗೀತ. ಮದುವೆಯ ವೈಭವವನ್ನೂ

ಈ ಮನೆಸೇರುವ ಸಂಭ್ರಮ ಮಿಾರಿಸಿತು.

ನಾರ್ಣಪ್ಪಯ್ಯ ಯೋಚಿಸಿದ್ದಂತೆಯೇ ಆಯಿತು. ಮಗನ ವಿವಾಹ ವಾಗಿ, ಸೊಸೆ ಮನೆಗೆ ಬಂದು, ಮಂಗಳ ಕಾರ್ಯಗಳನ್ನೆಲ್ಲ ಮುಗಿಸಿದ ಒಂದು ವರ್ಷದಲ್ಲೇ ಅವರು ಹೊರಟು ಹೋದರು. ಜೀವನದಲ್ಲಿ ಎಲ್ಲ ಬಗೆಯ ಸುಖವನ್ನೂ ಕಂಡ ಅವರ ದೇಹ ಅದೇಕೋ ಕುಂಬಳಕಾಯಿ ಯಂತಾಗಿತ್ತು. ಹೊರಗಣ ತೋರಿಕೆಯ ದೇಹದಾರ್ಢ್ಯತೆ, ಸೌಂದರ್ಯ, ಆರೋಗ್ಯಗಳೆಲ್ಲ ದೇಹದೊಳಕ್ಕೆ ಕಾಲಿಟ್ಟಿರಲಿಲ್ಲ. ನಾಲ್ಕಾರು ದಿನಗಳ ಕಾಲ ಹಾಸಿಗೆ ಹಿಡಿದವರು ಮತ್ತೆ ಮೇಲಕ್ಕೇಳಲಿಲ್ಲ. ಸಂಸಾರವನ್ನೂ ಮಿತ್ರ ರನ್ನೂ ದುಃಖದ ಮಡುವಿನಲ್ಲಿ ದೂಡಿ ರಾಯರು ಇಹಯಾತ್ರೆ ಪೂರೈಸಿ ದರು.

ತನ್ನ ಕೊನೆ ಹತ್ತಿರವಾಯಿತೆಂದು ಹಾಸಿಗೆ ಹಿಡಿದೊಡನೆ ರಾಯರಿಗೆ ಅರ್ಥವಾಗಿತ್ತು. ತಾನು ಅತ್ಯಂತ ಪ್ರಭಾವಶಾಲಿ ಜಮಿಾನುದಾರನಾಗ ಬೇಕು, ಎಲ್ಲರ ಮನೆಗಳನ್ನೂ ಮುರಿದು ತನ್ನ ಮನೆಯ ಒಲೆಗೆ ಉಪಯೋ ಗಿಸಬೇಕು ಎಂದು ಅವರೆಂದೂ ತಿಳಿದವರಲ್ಲ. ಸ್ವಾರ್ಥ ಆರ್ಥಿಕವಾಗಿ ಅವರನ್ನು ಆವರಿಸಿರಲಿಲ್ಲ. ತಾನು ಹೇಳಿದಂತಾಗಬೇಕು, ತನ್ನ ಮನೆಯ ಗೌರವ ಉಳಿಯಬೇಕು ಎಂಬುದೇ ಅವರ ಅಭಿಲಾಷೆ ಅದಕ್ಕಾಗಿ ಎಂತಹ ಹೋರಾಟಕ್ಕೂ ಅವರು ಸಿದ್ಧರಾಗಿದ್ದರು. ಯಾರನ್ನೇ ಅವರು ದಂಡಿಸಿ ದರೂ ಅದು ಬೆನ್ನಿನ ಏಟು. ಅವರೆಂದೂ ಯಾರ ಹೊಟ್ಟೆಗೂ ಹೊಡೆದಿರ ಲಿಲ್ಲ. ಈ ನಿಸ್ವಾರ್ಥ ಮನೋಭಾವದ ಪ್ರತೀಕವಾಗಿ ಅವರಿಗೆ ತನ್ನ ಕೊನೆಯ ಗಳಿಗೆಯ ಬಗೆಗೆ ಮೊದಲೇ ಅರಿವಾಗಿತ್ತು. ಅವರ ನೂರಾರು ಮಿತ್ರರು ಅವರನ್ನು ನೋಡಲು ಬಂದರು. ಹಳ್ಳಿಯ ರೈತರೆಲ್ಲ ರಾಯರ ಆರೋಗ್ಯ ಬಯಸಿ ದೇವರನ್ನು ಬೇಡಿಕೊಂಡರು. ರಾಯರೂ ತನ್ನ ಹಾರ್ದಿಕ ಮಿತ್ರರನ್ನೆಲ್ಲ ಬರಮಾಡಿಕೊಂಡರು. ರೈತರನ್ನು ಕರೆಸಿ ನಾಲ್ಕಾರು ಹಿತವಚನಗಳನ್ನಾಡಿದರು. ಗೆಳೆಯರಿಗೆ, ಈ ಮನೆ ಉಳಿಸಿ ಎಂದು ವಿನಂ ತಿಸಿಕೊಂಡರು. ಎಲ್ಲರೂ ರಾಯರ ಗುಣಗಳಿಗಾಗಿ ಕಣ್ಣೀರಿಟ್ಟರು.

"ನಾನೇನೋ ಹೋಗುತ್ತೇನೆ. ಈ ಮನೆಯ ಮಾನ, ಗೌರವ, ಕೀರ್ತಿ ಉಳಿಸಿಕೊಂಡು ಬರಬೇಕು. ರಾಮು ಇನ್ನೂ ಚಿಕ್ಕವನು. ಅವ ನನ್ನಾದರೂ ವಿದ್ಯಾವಂತನಾಗಿ ಮಾಡು. ನಿನ್ನ ವಿದ್ಯಾಭ್ಯಾಸ ಮುಂದು

ವರಿಯಲಿಲ್ಲ, ಚಿಂತೆಯಿಲ್ಲ. ವಂಶ ಪಾರಂಪರ್ಯವಾಗಿ ಬಂದಿರುವ ಎಲ್ಲ ಆಚಾರ, ಪದ್ಧತಿ, ವ್ಯವಸ್ಥೆಗಳನ್ನೂ ನಡೆಸಿಕೊಂಡು ಬರಬೇಕು . . . . . . ನೀನು ನನ್ನ ಮನೆಯ ಭಾಗ್ಯಲಕ್ಷ್ಮಿ ಮಗೂ . . . . ನಿನ್ನ ಗಂಡ ಇನ್ನೊಂದು ದಾರಿ ಹಿಡಿಯದಂತೆ ನೋಡಬೇಕಾದ್ದು ನಿನ್ನ ಧರ್ಮ . . . . . ಮೈದುನ ಮಗನೆಂದೇ ತಿಳಿ . . . . ." ಎಂದು ಮಕ್ಕಳನ್ನೂ ಸೊಸೆಯನ್ನೂ ಕರೆದು ಕುಳ್ಳಿರಿಸಿ ಉಪದೇಶವಿತ್ತರು. ಅವರ ಕಣ್ಣುಗಳೆಲ್ಲ ತೊಯ್ದು ಹೋಗಿದ್ದುವು. ಮಕ್ಕಳೂ ಸೊಸೆಯೂ ಅಳುತ್ತಿರುವುದನ್ನು ಕಂಡು ರಾಯರೂ ಕಣ್ಣೊರಸಿಕೊಂಡು ಅವರಿಗೆ ಧೈರ್ಯ ಹೇಳಿದರು.

ಸಾವಿರಾರು ಮಂದಿಯ ಸೌಹಾರ್ದ ಗಳಿಸಿ, ಎಲ್ಲರಿಗೂ ಸಹಾಯಕರಾಗಿ, ಅರಸನಂತೆ ಆಳಿದ ರಾಯರು ತಮ್ಮ ಇಹಲೋಕದ ಆಳ್ವಿಕೆ ಮುಗಿಸಿದರು.

ವೆಂಕಟ್ರಾಯರು ಯಜಮಾನರಾದ ಮೇಲೂ ಮನೆತನದ ಪದ್ಧತಿ, ಗೌರವ, ಸಂಭ್ರಮಗಳೆಲ್ಲ ಎಂದಿನಂತೆ ನಡೆದು ಬಂದುವು. ಅವರೂ ತಂದೆಯ ಸ್ಥಾನ-ಮಾನಗಳನ್ನು ಗಳಿಸಿಕೊಂಡು ಬಂದರು. ಪೇಟೆಯಿಂದ ಉಪಾಧ್ಯಾಯರೊಬ್ಬರನ್ನು ಕರೆಸಿಕೊಂಡು ತಮ್ಮನಿಗೆ ಪಾಠಹೇಳುವ ವ್ಯವಸ್ಥೆ ನಡೆಸಿದರು. ಎಳೆಯ ಪ್ರಾಯವಾದರೂ ಬೆಳೆದ ಬುದ್ಧಿಯಿಂದ ತನ್ನ ತಾಯಿಯ ಬೆಂಬಲದಿಂದ ಶ್ಯಾನುಭಾಗರೆಂದು ಹೇಳಿಸಿಕೊಂಡು, ಜಮಾನು ಉಳಿಸಿ ಅಧಿಕಾರ ನಡೆಸಿಕೊಂಡು ಬಂದರು.

ವಿವಾಹವಾದ ಒಂದೆರಡು ವರ್ಷ ರಾಯರ ಯೋಚನೆಯೆಲ್ಲ ಮನೆ, ತೋಟ, ಬಯಲುಗಳ ಕಡೆಗೇ ಹರಿದಿತ್ತು. ಇನ್ನೂ ಹನ್ನೆರಡರ ಕನ್ಯೆಯನ್ನು ಅವರು ವಿವಾಹವಾಗಿದ್ದರು. ಅವರದೂ ಹುಡುಗ ಪ್ರಾಯ. ಗೆಳೆಯರೇ ಅವರ ಎಲ್ಲ ಬಂಧು-ಬಳಗ ಸಂಸಾರ. ತಂದೆ ತೀರಿಕೊಂಡು ಅಧಿಕಾರ ಅವರ ಕೈಗೆ ಬಂದುದರಿಂದ ಜಾತ್ರೆ, ಕಂಬಳ, ಕೋಳಿ ಅಂಕ, ಬಯಲಾಟ ಇವುಗಳ ಸಂದರ್ಶನ, ವ್ಯವಸ್ಥೆಗಳಲ್ಲೇ ದಿನ ಕಳೆಯುತ್ತಿದ್ದರು. ಮನೆಯೊಳಗಿನ ಚಿಂತೆ ಅವರಿಗಿಲ್ಲ. ತಾಯಿ ಅದನ್ನೆಲ್ಲ ನೋಡಿಕೊಂಡು ಹೋಗುತ್ತಿದ್ದಳು. ಅವಳ ಆಡಳಿತೆ ವ್ಯವಸ್ಥೆಯಲ್ಲಿ ರಾಯರಿಗೆ ಯಾವ ಚಿಂತೆಯೂ ಇರಲಿಲ್ಲ. ರಾಮು ಮಾತ್ರ ತನ್ನ ಓದಿನಲ್ಲೇ ಮುಳುಗಿದ್ದ.

ರಾಯರ ವಿಶ್ವಕುಟುಂಬೀ ಮನೋಭಾವ ಹೆಚ್ಚುಕಾಲ ಉಳಿಯಲಿಲ್ಲ.

ವಿವಾಹ ಸುಖದ ಪರಿಚಯವಾದೊಡನೆ ಮನೆಯೇ ಅವರಿಗೆ ಎಲ್ಲ ಸುಖಗಳ ನೆಲೆಯೂ ಆಯಿತು. ದಿನದ ಇಪ್ಪತ್ತು ತಾಸೂ ತನ್ನ ಪತ್ನಿಯೊಡನೆಯೇ ಇರಲಾರಂಭಿಸಿದರು. ತಾರುಣ್ಯದ ಹೊಸತಿನಲ್ಲಿ ನಿಂತ ರಾಯರಿಗೆ ತನ್ನ ಪತ್ನಿ, ಅವಳು ಕೊಡುವ ಸುಖವಲ್ಲದೆ ಬೇರೇನೂ ಕಾಣಿಸಲಿಲ್ಲ. ಮನೆಯ ಚಿಂತೆಯನ್ನು ತಾಯಿ ಹೊತ್ತಿದ್ದಳು; ತನ್ನ ಸುಖದ ಚಿಂತೆ ಮಾತ್ರ ರಾಯರ ದಾಯಿತು. ಹಗಲೆನ್ನದೆ ಇರುಳೆನ್ನದೆ ವಿಹರಿಸಿ ವಿನೋದವಾಗಿ ಕಾಲ ಕಳೆದರು.

ಹೆಣ್ಣು-ಗಂಡುಗಳ ಜೀವನದಲ್ಲಿ ಮೊದಲು ಅವರ ಸುಖಜೀವನ ತಡೆಯುವ ಯಾವ ಅಡ್ಡಿಯನ್ನೂ ಸಹಿಸಲು ಸಾಧ್ಯವಾಗುವುದಿಲ್ಲ. ತಮ್ಮ ಈ ತೆರನ ಬಾಳು ಅಮರವಾಗಿರಲಿ ಎಂದು ಬಯಸುತ್ತಾರೆ. ಆ ಬಯಕೆಗೆ ವಿರುದ್ಧವಾಗಿ ಯಾರು ನಿಂತರೂ ಅವರಿಗೆ ಸಹನೆಯಿಲ್ಲ. ಅಂತಹ ತಡೆಗಳನ್ನೆಲ್ಲ ತಪ್ಪಿಸಿ ಎಲ್ಲಾದರೂ ಹೋಗಿ ತಮ್ಮ ವಿಹಾರ ಮುಂದುವರಿಸಲೂ ಅವರು ಹಿಂದಾಗುವುದಿಲ್ಲ. ಆದರೆ, ಈ ತೆರನ ವಿಹಾರಕ್ಕೆ, ಲೈಂಗಿಕ ಸುಖಕ್ಕೆ ಯಾವ ಅಡ್ಡಿಯೂ ಇಲ್ಲದಾಗ ಅವರ ಮನಸ್ಸೇ ಕಾಲಕಳೆದಂತೆ ಅಡ್ಡಿಯಾಗಿ ಬರುತ್ತದೆ. ತಾಯಿ, ತಮ್ಮ, ಬಂಧುಗಳು; ಯಾರ ಆತಂಕವೂ ಇಲ್ಲದೆ ರಾಯರು ಸುಖವನ್ನು ಸವಿದರು. ಅವರ ಇಚ್ಛೆಗೆ ಯಾವ ರೀತಿಯಿಂದಲೂ ವಿರೋಧವಾಗದೆ ಅವರಾಕೆ ಸಹಕರಿಸಿದಳು. ಆದರೂ, ತಾನು ತಂದೆಯಾಗಬೇಕೆಂಬ, ತಾನು ತಾಯಿಯಾಗಬೇಕೆಂಬ ಬಯಕೆ ಮಾತ್ರ ಇಬ್ಬರ ಹೃದಯದಲ್ಲೂ ಮೂಡಿ ಬೆಳೆಯುತ್ತಲೇ ಇತ್ತು. ಅದು ಬೆಳೆದಂತೆಲ್ಲ ಅವರ ಲೈಂಗಿಕ ಸುಖದ ಆಗ್ರಹ ಇಳಿಮುಖವಾಗುತ್ತ ಅದಕ್ಕೊಂದು ತಡೆ ಬಂದು ನಿಲ್ಲುತ್ತಿತ್ತು.

ರಾಮು ಮನೆಯಲ್ಲಿ ಓದುವುದನ್ನು ಮುಗಿಸಿ ಉಡುಪಿಗೆ ತೆರಳಿದ. ಅಲ್ಲಿಯೇ ಲಾಯರ್ ವಾಸುದೇವರಾಯರಲ್ಲಿ ಅವನು ಇಳಿದುಕೊಂಡ. ವಾರಕ್ಕೊಮ್ಮೆ ಮನೆಗೆ ಬಂದು ತಾಯಿಯನ್ನು ಕಂಡು ಹೋಗುತ್ತಲಿದ್ದ. ಮುಂದೆ ಅದೂ ಕಡಿಮೆಯಾಯಿತು. ಅಣ್ಣನೇ ಆಗಾಗ ಉಡುಪಿಗೆ ಬಂದು ಹೋಗುತ್ತಿದ್ದರು. ರಜೆ ಬಂದಾಗ ರಾಮು ಮನೆಗೆ ಹೋಗುವುದು ಮಾತ್ರ ಉಳಿಯಿತು. ಮೊದಲಿನಿಂದಲೂ ಅವನದು ಶಾಂತ ಸ್ವಭಾವ. ತನ್ನ ಪಾಡಿಗೆ ತಾನಿದ್ದು ತನ್ನ ಕೆಲಸ ನಿರ್ವಹಿಸುವ ಪ್ರಕೃತಿ. ಓದು ಅವ

ನಿಗೆ ಸರ್ವಸ್ವವಾಗಿತ್ತು. ತನ್ನ ಪಾಡಿಗೆ ಪಾಟಗಳನ್ನು ಓದಿ, ಯಾರ ತಂಟೆಗೂ ಹೋಗದೆ, ಮೊದಲ ದರ್ಜೆಯಲ್ಲಿ ಉತ್ತೀರ್ಣನಾಗುತ್ತ ಬಂದ.

ಮಕ್ಕಳಿಲ್ಲವೆಂಬ ಕೊರಗು ರಾಯರಿಗಿಂತ ಹೆಚ್ಚಾಗಿ ಅವರ ಪತ್ನಿಯನ್ನು ಪೀಡಿಸಿತು. ಅವರ ತಾಯಿಗಂತೂ ಹರಕೆ ಹೊತ್ತು, ಸೊಸೆಯಿಂದ ವ್ರತಗಳನ್ನು ಆಚರಿಸಿ, ಸಾಕಾಗಿ ಹೋಯಿತು. ಪೂಜೆ, ಪುಣ್ಯಸ್ಥಳಗಳ ಸಂದರ್ಶನ ಸಾಕಷ್ಟು ನಡೆಯಿತು.

ರಾಮು ದಿನಕಳೆದಂತೆ ಅಧಿಕ ಸ್ವಾತಂತ್ರ್ಯ ವಹಿಸ ತೊಡಗಿದ. ಅಣ್ಣ, ತಾಯಿಯರ ತೀರ್ಥಯಾತ್ರೆ ಅವನಿಗೆ ಹಿತಕರವಾಗೇ ಪರಿಣಮಿಸಿತು. ಅವರೂ ತಮ್ಮ ಚಿಂತೆಯಲ್ಲಿ ಇವನ ಕಡೆಗೆ ಹೆಚ್ಚಿನ ಗಮನವೀಯಲಿಲ್ಲ. ಹಣವಂತೂ ಬೇಕಾದಂತೆ ದೊರೆಯುತ್ತಿದ್ದುದರಿಂದ ರಾಮು ಉಡುಪಿಯಲ್ಲೇ ಉಳಿದುಕೊಂಡ. ಮನೆಗೆ ತೆರಳುವುದೇ ನಿಂತು ಹೋಯಿತು. ಪರೀಕ್ಷೆ, ಓದುಗಳೆಂದು ತನ್ನ ರಜಾದಿನಗಳನ್ನೆಲ್ಲ ಅವನು ಉಡುಪಿಯಲ್ಲೇ ಕಳೆಯುತ್ತಿದ್ದ.

ಮನೆಯ ಭಾರವೆಲ್ಲ ತಾಯಿಯ ಮೇಲೇ ಬಿತ್ತು. ರಾಯರೇಕೋ ತನ್ನ ಪತ್ನಿಯ ಬೇಸರದಿಂದ ತಾನೂ ಬೇಸರಗೊಂಡು ವೈರಾಗ್ಯ ಮನೋಭಾವ ತಳೆದರು. ಹೇಗಾದರೂ ಮನೆಯ ಕಾರ್ಯಭಾರ ಹೊರಲು ತಾಯಿಯಿದ್ದಾಳೆ, ತನ್ನಿಂದೇನು ಎಂಬ ಮನೋಭಾವ ಮೂಡಿ ಅವರ ದೃಷ್ಟಿ ಪುನಃ ತನ್ನ ಗೆಳೆಯರ ಕಡೆಗೆ ಹೊರಳಿತು. ಇಸ್ಪೀಟು, ಬಯಲಾಟಗಳ ಸ್ನೇಹ ಬೆಳೆಯಿತು. ಲಕ್ಷ್ಮಮ್ಮನ ಮಗಳು ವಾಸ್ತವವಾಗೇ ಅವರ ಕಡೆಗೆ ತಿರುಗಿದಳು. "ನಿಮ್ಮ ತಂದೆಯವರ ಅನ್ನತಿಂದು ಬೆಳೆದವರು ನಾವು, ನಿಮ್ಮನ್ನು ಬಿಟ್ಟು ಎಲ್ಲಿಗೆ ಹೋಗಲಿ—ಈ ಹೆಣ್ಣನ್ನು ನೀವೇ ಸಲಹಬೇಕು" ಎಂದು ಲಕ್ಷ್ಮಮ್ಮ ರಾಯರನ್ನು ಒಲಿಸಿಕೊಂಡಳು. ಅವಳ ಮಗಳು ಸೀತುವನ್ನು ಕಂಡ ರಾಯರು, ಆಕೆಯ ವಿನಂತಿಯನ್ನು ನಿರಾಕರಿಸದಾದರು. ನೀವೇ ಪ್ರಸ್ತಮಾಡಿಸಿಕೊಳ್ಳಬೇಕು; ಗೆಜ್ಜೆ ಪೂಜೆ ನಿಮ್ಮಿಂದಲೇ ಸಾಗಲಿ—ಎಂದು ಲಕ್ಷ್ಮಮ್ಮ ಆಡಿದಾಗ, ಅವಳ ಅಣ್ಣ ತಬಲಾ ರಂಗಪ್ಪ ಒತ್ತಾಯಪಡಿಸಿದಾಗ, ರಾಯರು ಒಪ್ಪಲೇ ಬೇಕಾಯಿತು.

ರಾಯರ ದಿನದ ಹೆಚ್ಚಿನ ಕಾಲ ಸೀತುವಿನ ಸಹವಾಸದಲ್ಲೇ ಕಳೆಯಲಾರಂಭವಾಯಿತು. ಅವರ ತಾಯಿಗೆ ಇನ್ನೊಂದು ಚಿಂತೆಯನ್ನಿದು

ಉಂಟುಮಾಡಿತು. ಆದರೂ, ಮಗನ ಮನಸ್ಸಿನ ಚಿಂತೆಯಾದರೂ ಕಳೆದು ಹೋಗಲಿ ಎಂಬುದರಿಂದ ಅವರು ದುಃಖವನ್ನು ನುಂಗಿಕೊಂಡರು. ಆದರೆ, ವಿಚಾರ ಮಾತ್ರ ಸಂಬಂಧಿಕರಿಗೆ ತಿಳಿಯದಿರಲಿಲ್ಲ. ರಾಯರ ಸೋದರ ಮಾವ ಬಂದಿದ್ದಾಗ ತಂಗಿಯಿಂದ ಎಲ್ಲ ವಿಷಯಗಳನ್ನೂ ಅರಿತರು. ಅವರಿಗೂ ಮನೆಯಲ್ಲಿ ಹೊಣೆಗಾರಿಕೆಯೇನೂ ಇರಲಿಲ್ಲ. ಮಕ್ಕಳು ಹೊಟೇಲು ಕೆಲಸಗಳಲ್ಲಿ ಅನುಭವ ಪಡೆದು ಊರು ಬಿಟ್ಟಿದ್ದರು. ಹೆಂಡತಿ ಮೊದಲೇ ಕೈಬಿಟ್ಟಿದ್ದಳು ತಂಗಿ ತನ್ನ ಗೋಳನ್ನು ಹೇಳಿಕೊಂಡಾಗ ಆಗಲಿ, ಎಂದು ಅವರೂ ಹೊರಟು ಬಂದರು. ಮನೆಯ ಮೇಲ್ವಿಚಾರ ನೋಡಿಕೊಳ್ಳಲು ನಿಂತು ಬಿಟ್ಟರು.

ರಾಮು ಮ್ಯಾಟ್ರಿಕ್ ಪರೀಕ್ಷೆ ಮುಗಿಸಿ ನಾಲ್ಕು ದಿನಗಳ ಮಾತಿಗೆ ಮನೆಗೆ ಬಂದ. ಮಂಗಳೂರಿಗೆ ಹೋಗಿ ಕಾಲೇಜಿಗೆ ಸೇರಬೇಕು. ಪರೀಕ್ಷೆಯಲ್ಲಂತೂ ಪಾಸಾಗುತ್ತೇನೆ. ಕಾಲೇಜಿನಲ್ಲಿ ತುಂಬ ಓದಬೇಕು. ಈಗಲೇ ಸ್ವಲ್ಪ ಓದಿಕೊಂಡು ಸಿದ್ಧತೆ ಮಾಡಿಕೊಳ್ಳುತ್ತೇನೆ—ಎಂದೆಲ್ಲ ಕತೆ ಹೇಳಿ, ತಾಯಿಯನ್ನು ಒಪ್ಪಿಸಿ ಉಡುಪಿಗೇ ಹಿಂತೆರಳಿದ. ಅಲ್ಲಿಯೇ ಅವನ ರಜಾದಿನಗಳೆಲ್ಲ ಕಳೆದು ಹೋದುವು.

ರಾಯರ ಮಾವ ಗಣಪಯ್ಯ ಮನೆಗೆ ಬಂದ ಮೇಲೆ ಮನೆಯ ವ್ಯವಸ್ಥೆಗಳೇ ಬದಲಾದುವು. ಬಾಕಿಯಾಗಿದ್ದ ಗೇಣಿ ಬಂತು; ಪಾಳುಬಿದ್ದ ಭೂಮಿಯಲ್ಲೂ ಬೆಳೆ ಬೆಳೆಸಿದರು. ಮಾವಿನ ಸಸಿಗಳನ್ನು, ತೆಂಗಿನ ಗಿಡಗಳನ್ನು ನೆಟ್ಟು ತುಂಬಾ ಕೃಷಿ ಮಾಡಿದರು. ಇಡೀ ದಿನ ದುಡಿವ ಜೀವ; ಆಸ್ತಿಯನ್ನು ಒಂದು ವ್ಯವಸ್ಥೆಗೆ ತಂದು ಅವರ ಸಂಪತ್ತನ್ನು ಹೆಚ್ಚಿಸಲು ಶ್ರಮಿಸಿದರು. ಅಳಿಯನ ಮನೆಯೂ ಉಳಿಯಿತು; ರೈತರೂ ಸಂತೋಷದಿಂದಲೇ ಇದ್ದರು.

ಗಣಪಯ್ಯನೇ ಉಡುಪಿಗೆ ಹೋಗಿ ಮನೆಗೆ ಬೇಕಾದ ಸಾಮಗ್ರಿಗಳನ್ನು ತೆಗೆದುಕೊಂಡು ಬರುತ್ತಿದ್ದರು. ಬೆಲ್ಲ, ಸೀಮೆ ಎಣ್ಣೆ, ಉಪ್ಪು ಎಲ್ಲವನ್ನೂ ಒಮ್ಮೆಗೇ ತಂದರೆ ಲಾಭವಿದೆ ಎಂದು ಹಾಗೆ ಮಾಡುತ್ತಿದ್ದರು. ಅವರು ಹಾಗೆ ಹೋಗಿದ್ದಾಗ ಲಾಯರ್ ವಾಸುದೇವರಾಯರಲ್ಲಿಗೆ ತೆರಳಿ ರಾಮುವನ್ನು ವಿಚಾರಿಸಿದರು. ಅವನ ನಿತ್ಯದ ಕಾರ್ಯಕ್ರಮಗಳನ್ನು ತಿಳಿದು ಆಶ್ಚರ್ಯವಾಯಿತು. ಸಾಹುಕಾರ ಶೇಷಗಿರಿ ಪ್ರಭುವಂತೂ

ಇನ್ನೂ ಹೆಚ್ಚಿನ ಕತೆ ತಿಳಿಸಿ, ರಾಮು ಕಾಲಕಳೆವ ಸ್ಥಳವನ್ನೂ ತೋರಿಸಿದ. ಗಣಪಯ್ಯ ತುಂಬ ದುಃಖದಿಂದ ಹಿಂತಿರುಗಿ ಎಲ್ಲವನ್ನೂ ತಂಗಿಗೆ ತಿಳಿಸಿದರು.

ತಂಗಿಗೆ ಅಣ್ಣನ ಮಾತನ್ನು ನಂಬುವುದು ಕಷ್ಟವಾಯಿತು. ಯಾರ ಗೋಜಿಗೂ ಹೋಗದೆ, ತನಗೆ ತಾನು ಓದಿನಲ್ಲೇ ಕಾಲ ಕಳೆಯುತ್ತಿದ್ದು, ಗಟ್ಟಿಯಾಗಿ ನಾಲ್ಕು ಮಾತನ್ನೂ ಆಡದ ಶಾಂತ ಸ್ವಭಾವದ ರಾಮು ಹೀಗಾದಾನೆಂದು ನಂಬುವುದು ಅವರಿಂದಾಗಲಿಲ್ಲ. ಆದರೆ, ಅಣ್ಣನ ಮಾತಿನಿಂದಲೂ, ರಾಮು ಮನೆಕಡೆಗೆ ಬರದಿರುವುದರಿಂದಲೂ, ಅವರು ನಂಬಬೇಕಾಯಿತು. ಅದಕ್ಕೆ ಪೋಷಕವಾಗಿ ವಕೀಲರಿಂದಲೂ ಅವರಿಗೆ ಕಾಗದ ಬಂತು.

ಮಂಗಳೂರಿಗೆ ಹೊರಡುವ ಮುಂಚಿತವಾಗಿ ರಾಮು ಮನೆಗೆ ಬಂದ. ತನ್ನ ವಿಚಾರ ಇಷ್ಟೆಲ್ಲ ರಂಪಕ್ಕಿಟ್ಟುಕೊಂಡಿದೆಯೆಂಬುದು ಅವನಿಗೆ ತಿಳಿದಿರಲಿಲ್ಲ. ಎರಡು ದಿನವಿದ್ದು ಅವನು ಹೊರಡಲು ಅಣಿಮಾಡಿದ. ತಾಯಿ ಸುಖದುಃಖಗಳ ಬಗೆಗೆ ಮಾತನಾಡುತ್ತ ಅವನ ವಿಚಾರವನ್ನೆತ್ತಿದರು. ಈ ದಾರಿ ಸರಿಯಲ್ಲ, ಜನ ಏನೋ ಆಡಿಕೊಳ್ಳುತ್ತಿದ್ದಾರೆ—ಎಂದು ಉಪದೇಶಿಸಿದರು. ರಾಮು ಅವಾಕ್ಕಾದ. ತಾನಿನ್ನು ಈ ಕತೆಯನ್ನು ಅಲ್ಲಗಳೆದು ಪ್ರಯೋಜನವಿಲ್ಲೆಂದು ಅವನಿಗೂ ತೋರಿತು. ಅವನು ಒಪ್ಪಿಕೊಂಡ. ಜತೆಗೆ, ತಾನು ಮಂಗಳೂರಿಗೆ ಹೋಗುತ್ತೇನೆ; ಕಾಲೇಜಿಗೆ ಸೇರಿ ಎಲ್ಲವನ್ನೂ ಮರೆಯುತ್ತೇನೆ ಎಂದು ಭರವಸೆಯಿತ್ತ.

ತಾಯಿ ತುಂಬ ಹರ್ಷದಿಂದ ಮಗನನ್ನು ಬೀಳ್ಕೊಟ್ಟಳು. ಗಣಪಯ್ಯನಿಗೂ ತೃಪ್ತಿಯಾಯಿತು. ಮಂಗಳೂರಿಗೆ ಹೋದರೆ ಅಳಿಯ ದಾರಿಗೆ ಬರುತ್ತಾನೆ; ಉಡುಪಿಯ ಸಹವಾಸ ಬಿಟ್ಟು ಬಿಡುತ್ತಾನೆ ಎಂದು ಹರ್ಷಿತರಾದರು. ರಾಮು ಮಂಗಳೂರಿಗೆ ಪ್ರಯಾಣ ಬೆಳೆಸಿದ.

"ವೆಂಕಟ್ರಾಯನನ್ನು ಸರಿದಾರಿಗೆ ತರಲು ಉಪಾಯವಿದೆ. ಮಂಗಳೂರಲ್ಲಿ ಬಿಡಾರ ಮಾಡಿದರೆ ಸರಿ" ಎಂದು ಗಣಪಯ್ಯ ಯೋಜನೆ ಹೂಡಿದರು. ಅಣ್ಣನ ಯೋಜನೆಗೆ ತಂಗಿ "ಅದೂ ನಿಜ. ಇನ್ನೂ ನಾಲು ತಿಂಗಳು ನೋಡೋಣ" ಎಂದು ತಲೆದೂಗಿದರು.

ಗಣಪಯ್ಯನ ಯೋಜನೆ ಫಲಿತವಾಗುವ ಮೊದಲೇ, ರಾಮು ತಾನು

ಪ್ರೀತಿಸಿದ ಹುಡುಗಿಯ ಜತೆಗೇ ಮಂಗಳೂರಿಗೆ ಹೋಗಿದ್ದಾನೆ ಎಂಬ ವಾರ್ತೆ ಅವರಿಗೆ ತಿಳಿಯಿತು. ಆಕೆ ಮಂಗಳೂರಿಗೆ ಹೋಗಿದ್ದಾಳೆ; ಎಂತಲೇ ರಾಮೂ ಆ ಕಡೆ ಹೋಗಿದ್ದ. ಕಾಲೇಜಿಗೇನೇ ಸೇರಿಕೊಂಡಿದ್ದಾನೆ; ಆದರೆ ಅವಳ ಸಹವಾಸ ತೊರೆದಿಲ್ಲ ಎಂದೂ ತಿಳಿದು ಬಂತು. ತಾಯಿ ಇದರಿಂದ ತುಂಬಾ ಚಿಂತೆಗೊಳಗಾದಳು. ಮಗನಿಗೆ ಕೊಂಚ ಕಠಿಣವಾಗೇ ಕಾಗದ ಬರೆದು ಹಣ ಕಳುಹಿಸುವುದನ್ನೇ ನಿಲ್ಲಿಸಿದಳು. ನೀನೇ ಬಂದು ಹಣ ತೆಗೆದುಕೊಂಡು ಹೋಗು ಎಂದು ಕಾಗದ ಬರೆಸಿದಳು.

ರಾಮು ಹಣ ತೆಗೆದುಕೊಳ್ಳಲು ಬರಲಿಲ್ಲ ಮಂಗಳೂರಿಗೆ ತೆರಳಿದ ನಾಲ್ಕು ತಿಂಗಳಲ್ಲಿ ಉಡುಪಿಗೆ ಬಂದು, ಸಾಹುಕಾರರಿಂದ ಹಣಪಡೆದು ಊರುಬಿಟ್ಟ.

---

# ಐದು

ಮಗು-ಕಿಟ್ಟು ಅಳುವುದಕ್ಕಾರಂಭಿಸಿತ್ತು

ಇನ್ನೂ ಬೆಳಕು ಹರಿದಿಲ್ಲ; ಇಷ್ಟು ಬೇಗನೆ ಎದ್ದು ಮಾಡುವುದಾದರೂ ಏನೆಂದು ರಾಮಯ್ಯ ಮುಂಜಾವಿನ ಚಳಿ ತಡೆಯಲು ಹೊದಪನ್ನೆಳೆದುಕೊಂಡು ಹಾಗೇ ಮಲಗಿದ್ದರು. ಏನೇನೋ ಯೋಚನೆಗಳು ತಲೆ ತುಂಬ ಸುಳಿಯುತ್ತಿದ್ದುವು. ನಿದ್ದೆ ಬಂದಿಲ್ಲವಾದರೂ ಪರವೆ ಇರಲಿಲ್ಲ. ಹೊತ್ತಾದ್ದು ತಿಳಿಯಲೂ ಇಲ್ಲ. ಗಡಿಯಾರದ ಅಲಾರಂನಂತೆ ಕಿಟ್ಟುವಿನ ಅಳು ನಡೆದಿತ್ತು. ಒಮ್ಮೆ ಅಳುತ್ತಾನೆ-ಸ್ವಲ್ಪ ಹೊತ್ತು ಸುಮ್ಮನಿರುತ್ತಾನೆ. ಪುನಃ ಇನ್ನೊಮ್ಮೆ ಅಳು. ಏನೋ ಈಗ ಅಳು ನಿಲ್ಲಬಹುದು; ತಾಯಿ ಅವನನ್ನೆತ್ತಿಕೊಳ್ಳಬಹುದು ಎಂದಿದ್ದರೆ ಹಾಗಾಗಲಿಲ್ಲ. ಅವನ ಅಳು ನಿಲ್ಲಿಸಲು ಯಾರೂ ಮುಂದೆ ಬಂದಂತಿಲ್ಲ. ರಾತ್ರಿ ಬಹಳ ಹೊತ್ತು ಬಾಗಿ ಎಚ್ಚರವಾಗಿದ್ದಳು. ಇನ್ನೂ ಎದ್ದಿಲ್ಲವೇನೋ ಅಂದುಕೊಂಡರು ರಾಮಯ್ಯ. ಮಗುವಿನ ಅಳು ಕೇಳಿಯಾದರೂ ಎಚ್ಚರಾಗಲಿ ಎಂದಿದ್ದರು. ಆದರೂ, ಬಾಗಿ ಎದ್ದಂತಿಲ್ಲ. ಮಗುವಿನ ಕಿರಿಚಾಟ ನಿಲ್ಲಲಿಲ್ಲ. ಸಿಟ್ಟಿನಿಂದ, ಮುಸುಕಿನೊಳಗಿಂದಲೇ ಬಾಗೀ ಎಂದು ಕೂಗಿದರು.

ಕೂಗು ಕೇಳಿ ಮಗು ಅಳುವುದನ್ನು ನಿಲ್ಲಿಸಿತು. ಬಾಗಿ ಎಂಬ ಕೂಗಿಗೆ ಪ್ರತಿಯಾಗಿ ಅವ್ವಾ ಎಂಬ ಉತ್ತರ ಬಂತು. ಆದರೆ ಬಾಗಿಯ ಮರುದನಿ ಮಾತ್ರ ಬರಲಿಲ್ಲ.

ಒಲ್ಲದ ಮನದಿಂದ, ಸಿಟ್ಟಿನಿಂದ ಚಡಪಡಿಸುತ್ತ ರಾಮಯ್ಯ ಮುಸುಕು ತೆಗೆದರು. ಕಣ್ಣುಜ್ಜಿಕೊಳ್ಳುತ್ತ ಇನ್ನೊಮ್ಮೆ ಕೂಗಿದರು. ಉತ್ತರವಿಲ್ಲ. ಆಗಲೇ ಎಷ್ಟು ಹೊತ್ತಾಗಿದೆ! ಒಳಗಿನ ಕೊಠಡಿಗೂ ಬಿಸಿಲು ನುಗ್ಗಿದೆ. ಇನ್ನೂ ಎದ್ದಿಲ್ಲವೆಂದರೆ. ಈ ಹೆಂಗಸರಿಗೆ ಸಲುಗೆ ಕೊಟ್ಟರೆ ಹೀಗೇ—ಎಂದು ಗೊಣಗುತ್ತ ತಾನೇ ಎದ್ದು ಅಡುಗೆ ಮನೆಗೆ ನಡೆದರು. ಯಾರೋ ನಡೆದು ಬರುವ ಸದ್ದು ಕೇಳಿಯೋ ಏನೊ—ಮಗು ಅಳು ನಿಲ್ಲಿಸಿತು. ರಾಮಯ್ಯ ಅಡುಗೆ ಮನೆಯೊಳಗೆ ಇಣಿಕಿದರು—ಬಾಗಿ ಇಲ್ಲ. ಹಿತ್ತಲ ಕಡೆಗೆ ಹೋಗಿರಬಹುದೇನೋ ಎಂದುಕೊಂಡು ಬಾಗಿಲು ತೆರೆದರು. ಹಿತ್ತಲ ಬಾಗಿಲ ಅಗಳಿ ಹಾಕಿರಲಿಲ್ಲ. ಆದರೆ, ಬಾವಿಕಟ್ಟೆಯ ಬಳಿಯೂ ಯಾರೂ ಇಲ್ಲ. ಬಾಗೀ-ಎಂದು ಕೂಗಿದರು.

ಮತ್ತೂ ಯಾರೂ ಓಗೊಡಲಿಲ್ಲ.

ರಾಮಯ್ಯ ಅಡುಗೆ ಮನೆಗೆ ಹಿಂತಿರುಗಿದರು. ಪಾತ್ರೆಗಳೆಲ್ಲ ಒಂದೆಡೆ ಸಜ್ಜುಗೊಳಿಸಲ್ಪಟ್ಟಿವೆ. ಕಸಮುಸುರೆ ಏನೂ ಇಲ್ಲ. ಅಲ್ಲಿಂದ ಕಿಟ್ಟುವಿನೆಡೆ ಬಂದು ಅವನನ್ನೆತ್ತಿಕೊಂಡರು. ಬಚ್ಚಲಿಗೆ ಕರೆದೊಯ್ದು ಮುಖ ತೊಳೆಸಿ ಬಂದರು. ಅಡುಗೆ ಒಲೆಯ ಮೇಲೆ ಇದ್ದ ಪಾತ್ರೆಯೊಂದನ್ನೆತ್ತಿ ಅದರಲ್ಲಿದ್ದ ಮೊಸರನ್ನ ತಿನ್ನ ಕೊಟ್ಟರು. ಮಗುವಿಗೆ ಅನ್ನ ತಿನಿಸುತ್ತಿದ್ದಂತೆ ಅವರ ಕಣ್ಣು ಯಾಕೋ ಮೇಲೆ ಸರಿಯಿತು.

ನೇಲೆಯಲ್ಲಿ ಎಂದೂ ಇರುತ್ತಿದ್ದ ಬಾಗಿಯ ಬಟ್ಟೆಗಳಾವುವೂ ಕಾಣಲಿಲ್ಲ. ಸೀರೆ, ರವಕೆ, ಒಂದೂ ಇಲ್ಲ. ರಾಮಯ್ಯನ ತಲೆಯಲ್ಲಿ ಏನೇನೋ ಯೋಚನೆಗಳು ಮೂಡಿದುವು. ಅಲ್ಲಿಂದೆದ್ದು ಮನೆಯ ಅಂಗಳಕ್ಕೆ ಬಂದರು, ಬಾವಿಯ ಬಳಿ ಸುತ್ತಲೂ ನೋಡಿದರು. ಬಾವಿಯನ್ನೊಮ್ಮೆ ಇಣಿಕಿದ್ದೂ ಆಯಿತು. ಪುನಃ ಮನೆಯೊಳಕ್ಕೆ ನಡೆದು ಎಲ್ಲೆಡೆಗೂ ದೃಷ್ಟಿ ಹರಿಯಿಸಿದರು. ಎಲ್ಲೂ ಬಾಗಿಯ ಬಟ್ಟೆಗಳ ಸುಳಿವಿಲ್ಲ.

ಮೂಲೆಯಲ್ಲಿದ್ದ ದೊಡ್ಡ ಮರದ ಪೆಟ್ಟಿಗೆಯ ಬಾಗಿಲು ತೆರೆದರು. ಬಾಗಿಯ ಪೆಟ್ಟಿಗೆ ಅದು. ಅದರಲ್ಲಿ ಬಟ್ಟೆಗಳಿವೆ. ಆದರೆ, ಅವೆಲ್ಲ ಕಿಟ್ಟು

ವಿನವು ಮಾತ್ರ. ಕೋಣೆಯ ಸುತ್ತಲೂ ತಿರುಗಿದರು. ಮೂಲೆಯಲ್ಲಿ ಅವಳ ಚಾಪೆ, ಹಾಸುಗಳು ಸುರುಳಿ ಬಿದ್ದಿವೆ

ಬಾಗೀ—

ತೀಕ್ಷ್ಣವಾದ ಸ್ವರದಿಂದ, ಉದ್ವೇಗಪೂರಿತ ಧ್ವನಿಯಿಂದ ರಾಮಯ್ಯ ಇನ್ನೊಮ್ಮೆ ಕೂಗಿದರು.

ಉತ್ತರ ಬರಲಿಲ್ಲ!

ಸಿಟ್ಟು, ದುಃಖ, ಹಾಗೇ ಬಾಗಿಯ ಬಗೆಗೆ ಅನುತಾಪವೂ ಮೂಡಿ ಬಂತು ರಾಮಯ್ಯನಿಗೆ. ದಾರಿ ತಪ್ಪಿದಳು ಆಕೆ! ನಿಜ! ತಾನು ಗದರಿಸಿದರೂ, ಬೆದರಿಸಿದರೂ ಆ ದಾರಿ ಬಿಡಲಿಲ್ಲ. ಈಗ ಇನ್ನೇನೂ ಮಾಡುವಂತಿಲ್ಲ. ಅವಳೇ ಹೊರಟು ಹೋದಳು. ಅದೂ ಒಳಿತೇ ಆಯಿತು. ಯಾರೋ ಒಬ್ಬನ ಬೆನ್ನು ಹತ್ತಿ ಅವಳು ಹೊರಟು ಹೋಗಿರಬಹುದು. ಆ ಯಾವನೋ ಒಬ್ಬ ಅಂತೋನಿಯೇ ಇರಬಹುದೆಂದು ಊಹಿಸುವುದು ಅವರಿಗೆ ಕಷ್ಟವಾಗಲಿಲ್ಲ. ತನ್ನ ಕಣ್ಣೆದುರಿಗೆ ನಡೆಯುವ ಅನಾಚಾರ ತಪ್ಪಿತು. ತನ್ನ ಹಳ್ಳಿ, ಸಮಾಜ, ಗೆಳೆಯರೆಲ್ಲ ಮನಬಂದಂತೆ ಆಡಿಕೊಂಡು ಗೇಲಿ ಮಾಡುವುದೂ ತಪ್ಪಿತು—ಎಂದವರ ಮನ ತೃಪ್ತಿಪಡೆಯಲೆಳಸಿದಂತೆ ತನ್ನ ಮಗಳ ಮೇಲಿನ ಅವರ ಪ್ರೇಮ ಅಧಿಕವಾಯಿತು. ಅವಳ ಭಾವೀ ಜೀವನದ ಬಗೆಗೆ ಚಿಂತೆ ಮೂಡಿತು. ಎಷ್ಟಾದರೂ ಅವರ ಕರುಳು; ಊರುಗೋಲು. ತಾಯಿಯಿಲ್ಲದ ಕೂಸೆಂದು ಅತ್ಯಂತ ಪ್ರೀತಿಯಿಂದ ಸಲಹಿದ್ದಾರೆ. ತನ್ನ ಕೊನೆಯ ದಿನಗಳಲ್ಲಿ ತನ್ನ ಸೇವೆಗೆ ಅವಳಾದರೂ ಇದ್ದಾಳಲ್ಲ ಎಂದು ಸಂತೃಪ್ತರಾಗಿದ್ದರು. ತನ್ನ ಮೊಮ್ಮಗ ಬೆಳೆಯುತ್ತಾನೆ; ತನ್ನ ಉರುಗೋಲಾಗಿ ಸಹಕರಿಸುತ್ತಾನೆ ಎಂಬ ಅವರ ಕನಸೇನೋ ಉಳಿದಿದೆ. ಆದರೆ, ತನ್ನ ಸರ್ವಸ್ವ ಎಂದಿದ್ದ ಮಗಳು–ತಪ್ಪು ದಾರಿ ಹಿಡಿದಳು ನಿಜ! ತನ್ನ ಪಾಪದ ಹಾಸಿಗೆಯ ಮೇಲೆ ಈ ಮಗುವನ್ನು ಮಲಗಿಸಲಿಲ್ಲ–ಎಂದವರಿಗೆ ತೃಪ್ತಿಯೂ ಉಂಟಾಯಿತು. ತನ್ನ ಮಾನ, ಗೌರವಗಳನ್ನು ಬೀದಿಗೆ ಎಸೆಯಲಿಲ್ಲ; ತನ್ನ ಮಗಳು ತನ್ನ ಕಣ್ಣೆದಿರೇ ನರಕ ಹುಟ್ಟಿಸಲಿಲ್ಲೆಂದು ಅವರ ಮನ ತೃಪ್ತಿ ಪಡೆಯಿತು. ಬಾಗಿಯ ಬಗೆಗೆ ಒಂದಿಷ್ಟು ಅಭಿಮಾನವೂ ಮೂಡಿತು.

ಒಂದೆಡೆ ಮಗಳ ಮೇಲಿನ ಪ್ರೇಮ; ಇನ್ನೊಂದೆಡೆ ಅವಳು ತುಳಿದ

ದಾರಿಯ ಬಗೆಗೆ ಜಿಗುಪ್ಸೆ; ಅವಳ ನೀತಿಯ ಬಗೆಗೆ ಸಿಟ್ಟು-ಇಂತಹ ಹಲವು ಉದ್ರೇಕಗಳಿಂದ ವಿಚಾರಗಳ ಬಿರುಗಾಳಿಗಳಿಂದ ದಿಕ್ಕುಕಾಣದಾಗಿ ಪರಿತಪಿಸಿದರು ರಾಮಯ್ಯ. ತನ್ನ ಕೊನೆಯ ದಿನಗಳಲ್ಲಿ ತಾನು ದಿಕ್ಕಿಲ್ಲದೆ, ದಾತರಿಲ್ಲದೆ ಬಾಳುವಂತಾಯಿತೆಂದು ಮರುಗಿದರು. ಅವರ ಆಶಾಜ್ಯೋತಿಯೊಂದೇ; ಅದು ಕಿಟ್ಟು. ಆ ಹಸುಳೆಗಾಗಿ, ಅದರ ಉತ್ಕರ್ಷೆಗಾಗಿ ತಾನು ಬಾಳುತ್ತೇನೆ ಎಂದುಕೊಂಡು ಎಲ್ಲ ಸಂಕಟಗಳನ್ನೂ ಧರಿಸಿಕೊಂಡರು. ತನ್ನವನೆಂದುಕೊಂಡು ಸಲಹಿ ಬೆಳೆಸಿದ ಮಗ ತನ್ನನ್ನು ಮರೆತು ಎಲ್ಲೋ ನಡೆದಿದ್ದಾನೆ. ಆ ದುಃಖವನ್ನು ಮರೆಯಲು ಬಾಗಿ ಸಹಕಾರಿಯಾದಳು· ತಬ್ಬಲಿಯಾದ ತನ್ನನ್ನು ತಾನೂ ತಬ್ಬಲಿಯಾಗಿ ಬಂದು ಸೇರಿದಳು. ಮಗನ ಚಿಂತೆ ಮನಬಂದಂತೆ ದೂರವಾಗುವಂತೆ ಮಾಡಿದಳು. ಆದರೆ, ಈಗ, ಅವಳೂ ಅವಳ ದಾರಿ ಹಿಡಿದಳು. ಇನ್ನು ಈ ಮಗು! ಅದೂ ಮುಂದೆ ಎಲ್ಲಿಗೆ ನಡೆದು ಹೋಗುವುದೋ ಯಾರು ಬಲ್ಲ? ಆದರೂ ಕರ್ತವ್ಯಮಾಡಬೇಕು. ತಾನು ತನ್ನ ಧರ್ಮ ಪಾಲಿಸಬೇಕು. ಅದೂ ತನ್ನ ಮಗನ-ಮಗಳ ದಾರಿ ತುಳಿಯಲಿ-ಬಿಡಲಿ-ನನ್ನ ಹಣೆಯಲ್ಲಿ ಬರೆದುದಾಗಲಿ-ಎಂದುಕೊಂಡರು ರಾಮಯ್ಯ.

ಬಾಗಿ ತನ್ನ ಭಾಗ್ಯವನ್ನರಸಿ ಹೊರಟು ಹೋದ ವಾರ್ತೆ ಹಳ್ಳಿಯಲ್ಲಿ ಹರಡಲು ಹೆಚ್ಚು ದಿನ ಹಿಡಿಯಲಿಲ್ಲ. ಅದಕ್ಕೆ ಪೋಷಕವಾಗಿ ಅಂತೋನಿಯು ಊರು ಬಿಟ್ಟ ವಾರ್ತೆ, ಅವನಿಗೆ ಮಂಗಳೂರಿಗೆ ವರ್ಗವಾದ ಸುದ್ದಿ ಹರಡಿಕೊಂಡಿತ್ತು.

ರಾಮಯ್ಯ-ಇಂತಹ ದುರಂತಗಳನ್ನು ತನ್ನ ಬಾಳಿನಲ್ಲಿ ಕಂಡು, ಅನುಭವಿಸಿ ಆಗಲೇ ಸಾಕಷ್ಟು ಎದೆಗಾರರಾಗಿದ್ದರು. ಆದರೆ, ರಕ್ತದ ಬಲ ಇರುವಾಗ ಇದೆಲ್ಲ ಭಾರವಾಗಿ ಕಾಣುವುದಿಲ್ಲ. ಸುಸ್ವಾದ ಎತ್ತಿಗೆ ಸಂಜೆಯಾಯಿತೆಂದರೆ ಸಾಮಾನು ತುಂಬಿರದ ಖಾಲಿ ಗಾಡಿಯೂ ಒಂದು ಹೊರಲಾರದ ಹೊರೆಯಾಗುತ್ತೆ. ಹಿಂದೆ ರಾಮಯ್ಯ ಇಂತಹ ಎಷ್ಟು ದುಃಖಗಳನ್ನು ನಾಲ್ಕಾರು ದಿನಗಳಲ್ಲೇ ಮರೆತಿಲ್ಲ! ಆದರೆ, ಇಂದು ಅವರ ಹೃದಯ ಆತ್ಮಗಳೆರಡರ ಶಕ್ತಿಯೂ ಉಡುಗಿದೆ. ಜೀವನ ಸಂಜೆಯ ಆಗಸದಲ್ಲಿ ಇಳಿಯುತ್ತಿದೆ. ಎಂತಲೇ ಆಯಾಸದಿಂದ ಬಳಲಿಕೆಯಿಂದ ತಡವರಿಸಿ ನಡೆವ ಯಾತ್ರಿಕನಿಗೆ ಕಾಲುಳುಕಿದಂತಾಯಿತು. ಜತೆಗೆ ಕತ್ತಲು ಬೇಗಬೇಗನೇ

ಧಾವಿಸಿ ಬರುತ್ತಿದೆ. ದಾರಿಯಲ್ಲಿ ಜನಸಂದಣಿಯೂ ಇಲ್ಲ. ರಾಮಯ್ಯ ವಾಸ್ತವವಾಗೇ ಅಧೀರರಾದರು. ಕಳವಳದಿಂದ ಅವರ ಅಳಿದುಳಿದ ಶಕ್ತಿಯೂ ಉಡುಗತೊಡಗಿತು. ಮನೆಯ ಕೆಲಸ, ಮಗುವಿನ ಆರೈಕೆ, ಅಡುಗೆಯ ಹೊರೆ—ಎಲ್ಲ ಭಾರ ಅವರ ತಲೆ ತಗ್ಗಿಸಿತು, ಎದೆ ಭಾಗಿಸಿತು. ತನ್ನ ಬಾಳಿನಲ್ಲಿ ಅವರು ಎಂದೂ ದೇವರ ಪೂಜೆ, ಜಪ, ತಪ ಮರೆತವರಲ್ಲ. ನಿತ್ಯ ಸ್ನಾನ ಜಪಗಳನ್ನು ಪೂರೈಸದೆ ಆಹಾರ ಕೂಡಾ ಸೇವಿಸಿದವರಲ್ಲ. ಇಹದ ಸುಖವನ್ನೆಲ್ಲ ಮರೆತು ಪರದ ಚಿಂತೆಯಿಂದ ದೇವರ ಪೂಜೆ ಮಾಡಿದ್ದಾರೆ. ಪರೋಪಕಾರ ಎಸಗಿದ್ದಾರೆ. ದಾನಧರ್ಮ ನಡೆಸಿದ್ದಾರೆ. ಆದರೆ, ಆ ದೇವರು ಅವರಿಗೆ ಇಹವನ್ನು ನರಕವಾಗಿ ಮಾಡಿ ತೋರಿಸಿದ್ದಾನೆ. ಸಂಸಾರ ಸಾಗರ ದಾಟುವುದು, ಇಹದಲ್ಲಿದ್ದು ಮಾನವ ಧರ್ಮ ಪಾಲಿಸುವುದು ನಿನ್ನ ಧರ್ಮ ಎಂದ ದೇವರೇ ಆ ಮಾನವಧರ್ಮ ಪಾಲಿಸಲಾರದಂತೆ ಸಕಲ ಸಂಕಟಪರಂಪರೆ ತಂದೊಡ್ಡಿದ್ದಾನೆ. ದೇವರು, ದೈವ, ಎಂಬ ವಾದಗಳೆಲ್ಲ ಹುಚ್ಚು ಕಲ್ಪನೆಗಳೇ ಎಂಬ ಸಂದೇಹವೂ ರಾಮಯ್ಯನಂತಹ ಧರ್ಮಪ್ರೇಮಿ ಭಕ್ತನ ಎದೆಯಲ್ಲೂ ಮೂಡತೊಡಗಿತು. ಇಷ್ಟು ವರ್ಷ ಈ ಸಾಲಿಗ್ರಾಮಕ್ಕೆ ಅಭಿಷೇಕ ಮಾಡಿ, ತನ್ನ ಭಕ್ತಿಯ ಪೂಜೆ ಅರ್ಪಿಸಿದರೂ ಈ ದೇವರಿಗೆ ಕರುಣೆ ಉಂಟಾಗಲಿಲ್ಲ. ತನ್ನ ಜೀವನದಲ್ಲಿ ಒಂದು ದಿನವೂ ಸುಖದ ತಿಂಗಳನ್ನು ಹರಡಲಿಲ್ಲ. ಈ ದೇವರು ಇಹವನ್ನು ನರಕವಾಗಿ ಮಾಡಿದ್ದಾನೆ; ಪರದ ಕಾಣದ ಸ್ವರ್ಗ ಇನ್ನೆಂತಹದೋ ಎಂದು ತಾಸುಗಟ್ಟಲೆ ರಾಮಯ್ಯ ಚಿಂತಿಸತೊಡಗಿದರು. ಯಾವ ಪೂಜೆ, ಧರ್ಮ, ಜಪಗಳಿಗೂ ಕಾಲ ಕಳೆಯದೆ ಅನ್ಯಾಯ ಅಧರ್ಮಗಳಲ್ಲಿ ಜೀವನ ಸವೆಯಿಸುವವರಿಗೆ ಯಾವ ಸಂಸಾರ ಸಂಕಟಗಳೂ ಇಲ್ಲ. ಅವರಿಗೆ ಇಹದಲ್ಲೇ ಎಲ್ಲ ಬಗೆಯ ಸುಖದ ಸ್ವರ್ಗ ನಿರ್ಧರವಾಗಿದೆ. ಪರದ ಬಗೆಗೆ ಚಿಂತಿಸುವ ತನ್ನಂತಹರಿಗೆ ಇಹ ನರಕವಾಗಿದೆ. ಇಲ್ಲಿ ಸ್ವರ್ಗದ ಸುಖ ಅನುಭವಿಸಿ ಅದರ ಸವಿ ಉಂಡವರಿಗೆ ಪರದ ಸ್ವರ್ಗ ನಿಜ! ಬೇವಿನ ರುಚಿಯನ್ನೇ ಬಲ್ಲ ಜೀವಿಗೆ ಸಕ್ಕರೆ ಹೇಗೆ ರುಚಿಸೀತು. ನರಕದಲ್ಲಿ ಬಾಳಿದ ಜೀವಿಗೆ ಸ್ವರ್ಗದಲ್ಲಿ ಇರುವುದು ಸಾಧ್ಯವೇ? ಹೆಂಡ ಕುಡಿಯುವವನಿಗೆ ಅಮೃತ ಕೊಟ್ಟರೆ ಅವನು ಕುಡಿಯಲಾರ. ಎಂತಹ ನಾಟಕ ಈ ಜಗತ್ತು! ಸಾವಿರ ಸಮಸ್ಯೆಗಳು, ಪ್ರಶ್ನೆಗಳು, ರಾಮಯ್ಯನ ಮನದಲ್ಲಿ ಮೂಡಿ ಮರೆಯಾದರೂ ಅವ

ರಿಗೆ ಉತ್ತರವೊಂದೂ ದೊರೆಯಲಿಲ್ಲ. ದೇವರು, ಭಕ್ತಿ, ಜಪ, ಪೂಜೆ— ಎಲ್ಲವೂ ಹುಚ್ಚು ಕಲ್ಪನೆ. ಕಾಣದ ದೇವರನ್ನು ಹುಡುಕಿ ಮನುಷ್ಯ ತನ್ನ ಕರ್ತವ್ಯ ಮರೆಯುವಂತೆ ಮಾಡುವ ದಾರಿ. ತನ್ನ ಸಂಸಾರದ ಬಗೆಗೆ, ಸಮಾಜದ ಬಗೆಗೆ ಕರ್ತವ್ಯ ಮಾಡಲು ಹಿಂಜರಿವ ಮಾನವನಿಗೆ ಅಡಗಿ ಕೊಳ್ಳಲು ಆಸ್ಪದ ಈ ಪರದೆ—ಎಂದು ಅವರ ಒಳಗಿನ ದನಿ ಕೂಗಿ ಹೇಳಿತು. ಆ ಹಸುಳೆಯ ನಿಷ್ಕಲ್ಮಷ ಹೃದಯ, ಪವಿತ್ರವಾದ ಹೃದಯ ಅದಕ್ಕೆ ಅವರಲ್ಲಿರುವ ಅಮರ ಪ್ರೇಮ. ಅವರಿಗೆ ದೇವರ ಚಿಂತೆಯನ್ನು ಅಲ್ಪವಾಗಿ ತೋರಿಸಿತು. ತನ್ನ ಬಾಳಿನ ದುರಂತ ಚಿತ್ರಗಳು, ತಾನು ಉತ್ಕರ್ಷೆಯ ಬಯಕೆಯಿಂದ ಸಲಹಿದ ಮಗ, ಮಗಳು–ತನ್ನ ಬೆಂಬಲಕ್ಕೆ ಇಲ್ಲವಾದ ಪರಿಸ್ಥಿತಿ ಅವರಲ್ಲಿ ತ್ಯಾಗದ ಮನೋಭಾವ ಮೂಡಿಸಿದುವು.

ಕರ್ಮಣ್ಯೇವಾಧಿಕಾರಸ್ತೇ–ಮಾಫಲೇಷು ಕದಾಚನ!

ಈ ಗೀತಾ ನುಡಿ ಅವರ ಮನದಲ್ಲಿ ಪ್ರತಿಧ್ವನಿತವಾಯಿತು. ನಿಜ! ನಾನು ನನ್ನ ಕರ್ತವ್ಯವನ್ನು ಮಾಡಬೇಕು. ಫಲವನ್ನು ಅಪೇಕ್ಷಿಸಿ, ಅದನ್ನು ನಾನೇ ಸವಿಯಬೇಕೆಂಬ ಮನೋಭಾವ ಹೊಂದಿದುದರಿಂದಲೇ ನನ್ನ ಮಗ–ಮಗಳು ನನ್ನನ್ನು ಬಿಟ್ಟು ನಡೆದರು. ಈಗ ಈ ಕೂಸು ನನ್ನ ಕೈಗೂಸಾಗಿದೆ. ಇದನ್ನು ಬೆಳೆಸುವ ಧರ್ಮ ನನ್ನದು. ಅದು ಮುಂದೆ ಯಾವ ದಾರಿ ಹಿಡಿದರೆ ನನಗೇನು?

ಆದರೆ . . . . ದೇವರು . . . .

ತನ್ನ ಚಪಲ ತೀರಿಸಿಕೊಳ್ಳಲು ಸನ್ಯಾಸಿ ತಪಸ್ಸನ್ನಾಚರಿಸಿದಂತೆ ಈ ನೀತಿ! ಕಾಣದ ದೇವರ ಸೇವೆ ಜೀವನದಲ್ಲಿ ಇದುವರೆಗೂ ಮಾಡಿದ್ದಾ ಯಿತು. ತನ್ನ ಮಕ್ಕಳೇ ತನ್ನ ಕೈಬಿಟ್ಟಿರುವಾಗ ಈ ದೇವರು ಎಲ್ಲಿದ್ದಾನೆ. ಅವನೆಂದೋ ನನ್ನನ್ನು ಬಿಟ್ಟು ಹೋಗಿರಬಹುದು. ಇಡಿಯ ಲೋಕದ ಕಲ್ಯಾಣಕ್ಕಾಗಿ ದುಡಿವ ದೇವರ ಸೇವೆ ಮಾಡಲು ನಾನು ಯಾರು? ಇಂತಹ ಕೋಟಿ ಜೀವಿಗಳ ಸೇವೆಯನ್ನು ಬಯಸುವ, ಅವರ ಏಳಿಗೆ ಬಯಸದ ದೇವರಿದ್ದರೆ ಅವನಿಂದ ಯಾವ ಕಲ್ಯಾಣವಾದೀತು? ವಿಶ್ವವನ್ನೇ ಅಂಗೈ ಯಲ್ಲಿರಿಸಿದ ವಿಶ್ವೇಶ್ವರನ ಸೇವೆಮಾಡಲು ನಾವು ಯಾರು? ನಮ್ಮ ಉತ್ಕರ್ಷೆ ಗಾಗಿ, ಪರದಲ್ಲಿ ಇಹದಲ್ಲಿ ಸುಖಸ್ವಾಧಿತವಾಗಲೆಂದು–ಸ್ವಾರ್ಥಪರರಾಗಿ ನಾವು ಸೇವೆ ಸಲ್ಲಿಸುತ್ತೇವೆ. ಈ ಸ್ವಾರ್ಥವಿಲ್ಲದಿದ್ದರೆ ನಾವೆಂದೂ ದೇವ

ರನ್ನು ಪೂಜಿಸುತ್ತಿರಲಿಲ್ಲ ಕಾಣದ ದೇವರನ್ನು ಸ್ವಾರ್ಥಕ್ಕಾಗಿ ಪೂಜಿಸಿದೆ; ಕಾಣುವ ನನ್ನ ದೇವರನ್ನೂ ಪೂಜಿಸಿದೆ. ಕಾಣುವವರು ಹೊರಟು ಹೋದರು; ಕಾಣದವರು ಎಲ್ಲಿದ್ದಾರೆ? ಇಲ್ಲ! ಈ ಪೂಜೆ, ಈ ಭಕ್ತಿ, ಈ ಪುಣ್ಯಕಾರ್ಯ ಎಲ್ಲ ಸ್ವಾರ್ಥ, ಅಶಕ್ತಿ, ಭೀತಿಯ ಪ್ರತೀಕ. ಎಂತಲೇ ಈ ಲೋಕದಲ್ಲಿ ಯಾರಿಗೂ ದೇವರು ಒಲಿದಿಲ್ಲ. ನನ್ನ ಕರ್ತವ್ಯ ನನಗೆ ದೇವರು.

"ತಾತಾ . . . . . . . "

ನಿಸ್ವಾರ್ಥದಿಂದ ತನ್ನ ಕರ್ತವ್ಯ ಮಾಡುತ್ತೇನೆ ಎಂಬ ನಿರ್ಧಾರದಿಂದ ಕುಳಿತುಕೊಂಡಿದ್ದ ರಾಮಯ್ಯನವರನ್ನು ಕಿಟ್ಟುವಿನ ಕರೆ ಎಚ್ಚರಿಸಿತು. ಅವರ ಕಣ್ಣುಗಳಿಂದ ಕಣ್ಣೀರಿನ ಹೊಳೆ ಹರಿಯುತ್ತಿತ್ತು. ತನ್ನ ಮನದಲ್ಲಿ ಉಂಟಾದ ಜ್ಞಾನದ ಮಥನ ಅವರನ್ನು ಯಾವುದೋ ಲೋಕಕ್ಕೆ ಎಳೆದಿತ್ತು. ಇದುವರೆಗೆ ತಾನು ಬೆಟ್ಟಕ್ಕೆ ಮಣ್ಣು ಹೊತ್ತೆ, ಗಂಗಾಧರನಾದ ಶಿವನ ಲಿಂಗದ ಮೇಲೆ ಅಭಿಷೇಕ ಮಾಡಿ, ಇದು ನನ್ನ ಪೂಜೆ, ಸೇವೆ ಎಂದು ಕೊಂಡೆ. ಲೋಕದ ತಂದೆಯ ಮಕ್ಕಳಾಗಿ ಲೋಕದ ಸೇವೆಗೆ ಮೀಸಲಾದ ಮಕ್ಕಳನ್ನು ನನ್ನವರು, ನನಗೇ ಬೇಕು ಎಂದು ಸಲಹಿದ, ಸ್ವಾರ್ಥದ ಅಸ್ತಿವಾರದ ಮೇಲಿನ ತನ್ನ ಸೇವೆಯು ಅಪ್ರಯೋಜಕವಾದ ಕಾರಣ ತಿಳಿಯಲು ಇಷ್ಟು ಕಾಲ ಬೇಕಾಯಿತೇ ಎಂದು ತನ್ನ ಮೌಢ್ಯದ ಬಗೆಗೆ ತಾನೇ ಕಣ್ಣೀರಿಟ್ಟರು. ಏನೇ ಬರಲಿ, ಕಿಟ್ಟುವಿನ ಉತ್ಕರ್ಷೆ ನನ್ನ ಧರ್ಮ, ನನ್ನ ಕರ್ಮ ಎಂದು ನಿರ್ಧರಿಸಿದರು. ಅವನ ಬಾಳು ಅವನದು, ಸಮಾಜದ್ದು–ನನ್ನದಲ್ಲ–ಎಂದುಕೊಂಡರು.

ಕರ್ಮಣ್ಯೇ . . . . ಅವರ ಮನದಲ್ಲಿ ಪ್ರತಿಧ್ವನಿಸುತ್ತಿತ್ತು.

ಕಿಟ್ಟುವಿನ ಆರೈಕೆ ರಾಮಯ್ಯನ ಧರ್ಮವಾಯಿತು; ಪೂಜೆಯಾಯಿತು. ಗಂಟೆಗಟ್ಟಲೆಯ ಪೂಜೆ ನಿಂತು, ಗಾಯತ್ರಿಯೊಂದೇ ಉಳಿಯಿತು ಅವರ ಪಾಲಿಗೆ. ಒಂದೆರಡು ತಿಂಗಳ ಕಾಲ ಕಷ್ಟದಿಂದ ಮನೆ ಕೆಲಸ ಮಾಡಿ, ಅಡುಗೆಯ ಭಾರ ವಹಿಸಿ, ಕಿಟ್ಟುವಿನ ಆರೈಕೆ ನೋಡುವುದರಲ್ಲಿ ಅವರು ಅರ್ಧ ಇಳಿದು ಹೋದರು. ಆದರೆ, ಹೀಗೆ ಎಷ್ಟು ಕಾಲ? ಮನೆ ಬಿಟ್ಟು ಒಂದು ನಿಮಿಷ ಹೊರ ಹೊರಡುವಂತಿಲ್ಲ. ಎತ್ತ ಹೋಗುವುದಿದ್ದರೂ ಕಿಟ್ಟುವನ್ನೆತ್ತಿಕೊಂಡೇ ಹೋಗಬೇಕು. ಜೀವನದ ದಾರಿಯೂ

ಬರಡಾಗಿದೆ. ಅಲ್ಲಿ ಇಲ್ಲಿ ಪೂಜೆ, ತಿಥಿ ಎಂದುಕೊಂಡು ಜೀವನ ನಿರ್ವಹಣ ಮಾಡಬೇಕಾಗಿದೆ. ಜತೆಗೆ ಕೈಯಲ್ಲಿದ್ದ ಕಾಸೆಲ್ಲ ಬಾಗಿಯ ಅಶನಾರ್ಥದ ದಾವೆಗೆ ವೆಚ್ಚವಾಗಿದೆ. ಈಗ ಅವಳು ಹೊರಟು ಹೋದಳು. ದಾವೆ ಉರುಳಿ ಬೀಳುವದರೊಂದಿಗೆ, ಹೊಟ್ಟೆ ಬಾಯಿ ಕಟ್ಟಿ ಕೂಡಿ ಹಾಕಿದ ಕಾಸೂ ನೀರು ಪಾಲಾಯಿತು. ಮಗುವಂತೂ ತಾಯಿಯನ್ನು ನೆನೆದು ನೆನೆದು ಬಡವಾಗಿದೆ. ಅದನ್ನು ಸಮಾಧಾನ ಪಡಿಸುವುದೇ ಒಂದು ತಪಸ್ಸು. ಮನೆತುಂಬ ಮಕ್ಕಳಿದ್ದರೆ ಆ ಮಾತು ಬೇರೆ. ಈ ಪರಿಸ್ಥಿತಿಯಲ್ಲಿದ್ದ ರಾಮಯ್ಯನಿಗೆ ಕೊನೆಗೆ ಬೆಳಕು ತೋರಿತು. ಅವರ ಚಿಂತಾಜನಕ ಪರಿಸ್ಥಿತಿಯ ಬಗೆಗೆ ಮರುಗಿ ಅವರ ತಂಗಿ ಕಾಗದ ಬರೆದಿದ್ದಳು; ಸ್ವಾಗತಿಸಿದ್ದಳು. ಎಂತಲೇ ರಾಮಯ್ಯ ಬೇರೆ ದಾರಿ ಕಾಣದೆ ತಂಗಿಯ ಮನೆಗೆ ನಡೆದರು.

ನಾಗಪ್ಪಯ್ಯ ಊರ ಶ್ಯಾನುಭಾಗರು. ಅಲ್ಪ ಸ್ವಲ್ಪ ಜಮೀನೂ ಇದೆ. ತಾವೇ ಸ್ವಂತವಾಗಿ ಸಾಗುವಳಿ ಮಾಡಿಸುತ್ತಿದ್ದುದರಿಂದ ಊಟಕ್ಕೆ ಯಾವ ತೊಂದರೆಯೂ ಇರಲಿಲ್ಲ. ಗೌರಮ್ಮ ಅವರ ಮನೆ ಸೇರಿದ ಬಳಿಕ ಮನೆಯ ಸ್ಥಿತಿಯೇ ಬದಲಾಯಿತು. ಕೊಟ್ಟಿಗೆ ತುಂಬ ದನಕರುಗಳು ಬಂದುವು. ನಾಗಪ್ಪಯ್ಯನಿಗೂ ಹಣ ತಾನಾಗೇ ಸೇರಿತು. ಅವರ ಇಬ್ಬರು ಮಕ್ಕಳೂ ಸರಕಾರಿ ನೌಕರಿಯಲ್ಲಿದ್ದಾರೆ. ನಾಲ್ಕು ಮಂದಿ ಹೆಣ್ಣು ಮಕ್ಕಳಿಗೂ ಮದುವೆಯಾಗಿದೆ. ಎರಡನೆಯ ಮಗಳು ತನ್ನ ಗಂಡನನ್ನು ಕಳೆದುಕೊಂಡು ಅವರ ಮನೆಸೇರಿದಾಗ ಅವರ ಸುಖದ ಬಾಳಿನಲ್ಲಿ ಕೊಂಚ ದುಃಖ ಬೆರೆಯಿತು. ಆದರೂ ಮನೆತುಂಬ ತುಂಬಿದ್ದುದರಿಂದ ಆ ಸಂತಾಪ ಅವರನ್ನು ಹೆಚ್ಚಾಗಿ ಕಾಡಲಿಲ್ಲ. ಸೊಸೆಯಂದಿರು, ಮೊಮ್ಮಕ್ಕಳು, ಜತೆಗೆ ಅಳಿಯಂದಿರು ಮತ್ತು ಮಕ್ಕಳ ಭೇಟಿ. ಮನೆಯಲ್ಲಿ ಸದಾ ಔತಣವೇ.

ಅಣ್ಣನ ಅವಸ್ಥೆಗಾಗಿ ಗೌರಮ್ಮ ತುಂಬಾ ಮರುಗಿದಳು. ಅತ್ತಿಗೆ ತೀರಿಕೊಂಡಾಗಲೂ, ಈ ಮನೆ ಸಾಕು, ನಿನಗೇನು, ಒಂದು ಹಿಡಿ ಅನ್ನ, ನಮ್ಮಲ್ಲಿಗೇ ಬಂದು ಬಿಡು ಎಂದಿದ್ದಳು. ಮಕ್ಕಳ ಜತೆಗೆ ಆಟವಾಡುತ್ತ ಕಾಲಕಳೆದರೆ ಎಲ್ಲ ಚಿಂತೆ ದೂರವಾಗುತ್ತೆ, ಎಂದಿದ್ದಳು. ನಾಗಪ್ಪಯ್ಯನೂ "ಇಲ್ಲೇ ಬಂದು ಬಿಡಿ. ಯಾರ ಸಂಸಾರಕ್ಕಾಗಿ ಈ ಕಷ್ಟದ ಬಾಳು ನಿಮಗೆ" ಎಂದಿದ್ದರು. ಇನ್ನೊಬ್ಬರ ಕೈಕೆಳಗೆ ಯಾಕೆ ಬಾಳಬೇಕು; ಅವರ ಅನ್ನದ ಹಂಗಿಗೇಕೆ ಬೀಳಬೇಕೆಂದು ಅವರು ಆಗ ಸುಮ್ಮನಿದ್ದರು. ಇಂದೋ ನಾಳೆ

ಯೋ ಹೋದರಾಯಿತು, ಇಂದು ತಂಗಿಯ ಮನೆ, ನಾಳೆ ಮಗಳ ಮನೆ ಎಂದಿದ್ದು ಕಾಲಕಳೆದರೆ ಸರಿ ಎಂದುಕೊಂಡಿದ್ದಂತೆ ಬಾಗಿಯೇ ಮನೆಗೆ ಬಂದಳು.

ಈಗ ಬಾಗಿಯ ದುರ್ಗತಿಗಿಂತ ಹೆಚ್ಚಾಗಿ ರಾಮಯ್ಯನ ದುಃಖದ ಸ್ಥಿತಿಗೆ ಗೌರಮ್ಮ ತುಂಬ ನೊಂದುಕೊಂಡಳು. ತಾನು ಬಂದು ಹೊಕ್ಕ ಮನೆ ತುಂಬಿಕೊಂಡಿತು; ಬಿಟ್ಟು ಬಂದ ಮನೆ ಬರಿದಾಯಿತು ಎಂದು ಮರುಗಿದಳು. ತನ್ನ ಮಗಳ ವೈಧವ್ಯದುಃಖದ ಅನುಭವ ಅನುಭವಿಸಿದ ಅವಳಿಗಿಂದು ಅಣ್ಣನ ಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗ ಲಿಲ್ಲ. ನಿನ್ನ ಬಾಳೇ ಹೆಣ್ಣಿನ ಬಾಳಿನಂತಾಗಿದೆ. ಕಷ್ಟ ನಿನಗೆ ತಪ್ಪಿದ್ದೇ ಇಲ್ಲವೆಂಬಂತೆ ಕಾಣುತ್ತದೆ. ಒಮ್ಮೆ ಬಾಗಿಯನ್ನು ಕರೆದುಕೊಂಡು ಬಾ. ಕೆಲ ದಿನವಿದ್ದು ಹೋಗು ಎಂದು ಅಣ್ಣನಿಗೆ ಪತ್ರ ಬರೆಸಿದ್ದಳು. ಆದರೂ, ರಾಮಯ್ಯ ತಂಗಿಯ ಮನೆಗೆ ಹೋಗಿರಲಿಲ್ಲ. ನನ್ನ ಈ ಮುಖ ಅವರಿಗೆಲ್ಲ ಹೇಗೆ ತೋರಿಸಲಿ? ನಮ್ಮ ಹಣೆ ಬರಹ; ಅನುಭವಿಸೋಣ. ನಾವೇಕೆ ಇನ್ನೊಬ್ಬರ ಅನ್ನಕ್ಕೆ ಕೈನೀಡಬೇಕು ಎಂದು ಬಾಗಿ ತಂದೆಯ ಆಲೋಚನೆ ಯನ್ನು ತಡೆದಿದ್ದಳು.

ಬಾಗಿ ಮನೆಬಿಟ್ಟು ಹೋದ ವಿಚಾರ ಗೌರಮ್ಮನಿಗೆ ತಿಳಿಯದಿರಲಿಲ್ಲ. ಪುನಃ ಅವಳು ಕಾಗದ ಬರೆಸಿದಳು. ಅಣ್ಣನಿಗೆ ಈ ದುಃಖ ಧರಿಸುವುದು ಸಾಧ್ಯವಾಗದು. ಅವನಿಗೆ ಹುಚ್ಚು ಹಿಡಿದೀತೆಂದು ಅವಳು ಹೆದರಿದಳು. ತಡೆಯಿಲ್ಲದೆ ಒಂದರ ಹಿಂದೊಂದರಂತೆ ಆಘಾತಗಳು ಬಂದರೆ ಹೇಗೆ ತಾಳ ಬಲ್ಲ? ಅಣ್ಣನ ದುಃಖ ತನ್ನದೆಂದು ಅವಳು ಅತ್ತಳು. ಕೂಡಲೇ ಮಗು ವನ್ನು ಕರೆದುಕೊಂಡು ಬರುವಂತೆ ಬರೆಸಿದಳು.

ರಾಮಯ್ಯ ಬಂದುದನ್ನು ಕಂಡು ಗೌರಮ್ಮನಿಗೆ ಹಿಡಿಯಲಾರದಷ್ಟು ಆನಂದವಾಯಿತು. ಗಂಟೆಗಟ್ಟಲೆ ತನ್ನ ಸಂಸಾರದ ಬಗೆಗೆ ಹೇಳಿದಳು. ಅವರ ಸಂತಾಪ ನೀಗಲು ಯತ್ನಿಸಿದಳು. ಇಲ್ಲೇ ಇದ್ದುಬಿಡು. ಇದೂ ನಿನ್ನ ಮನೆ. ಸುಮ್ಮನೆ ಇಳಿವಯಸ್ಸಿನಲ್ಲಿ ದೇಹ ದಂಡಿಸಬೇಡ; ಮನ ಕರಗಿಸಬೇಡ. ಕಿಟ್ಟುವನ್ನು ತನ್ನ ಮಗನೆಂದೇ ತಿಳಿದು ಸಲಹುತ್ತೇನೆ— ಪಾಪ . . . . ತಬ್ಬಲಿ, ಎಂದು ಸಮಾಧಾನ ಹೇಳಿದಳು.

ಹೊಸ ಮನೆ, ಹೊಸ ವಾತಾವರಣ, ಮನೆತುಂಬ ಮಕ್ಕಳು, ಕಿಟ್ಟು

ವಿನಲ್ಲಿ ತುಂಬ ಒಳ್ಳೆಯ ಪರಿಣಾಮ ಉಂಟುಮಾಡಿದುವು. ಆದರೂ ತಾಯಿಯನ್ನು ಮರೆಯುವುದು ಅವನಿಂದ ಸಾಧ್ಯವಾಗಲಿಲ್ಲ. ತಾಯಿಗಿಂತ ಹೆಚ್ಚಾಗಿ ಗೌರಮ್ಮ ಅವನನ್ನು ನೋಡಿಕೊಳ್ಳುತ್ತಿದ್ದಳು. ಪುಟ್ಟ ಮಕ್ಕಳೊಡನಾಡುತ್ತ ದಿನಕಳೆಯುತ್ತಿದ್ದ ಕಿಟ್ಟು. ಜತೆಗೆ ಅಪ್ಪನ ತಾತ ಬಳಿಯಲ್ಲೇ ಇದ್ದಾರೆ. ಆದರೂ ಮೂರು ನಾಲ್ಕು ದಿನಗಳಿಗೊಮ್ಮೆಯಾದರೂ ತಾಯಿಯ ನೆನಪು ಅವನ ಮನದಲ್ಲಿ ಮೂಡಿ ಕಣ್ಣೀರು ಹರಿಯಿಸಿ ಮಾಯವಾಗುತ್ತಿತ್ತು.

ಕಿಟ್ಟು ತನ್ನ ಹೊಸ ವಾತಾವರಣದಲ್ಲಿ ಬೆಳೆದು ಒಂದ. ಮೂರು ವರ್ಷ ಮೂರು ತಿಂಗಳಾಗಿ ಕಂಡಿತು ರಾಮಯ್ಯನಿಗೆ. ಅವರು ವಿಫಲವಾಯಿತೆಂದಿದ್ದ ಅಶನಾರ್ಥದ ದಾವೆ ಸ್ವಲ್ಪ ಫಲವನ್ನು ತಂದುಕೊಟ್ಟಿತು. ಕಿಟ್ಟುವಿನ ಹೆಸರಿಗೆ ಸಾವಿರ ರೂಪಾಯಿ ಬಂತು. ಅವರು ಖರ್ಚುಮಾಡಿದ ಐನೂರೂ ಮರಳಿ ದೊರೆಯಿತು ಹೇಗಾದರೂ ಮಾಡಿ ಮಗುವಿನ ಬಾಳನ್ನು ಹಸನು ಮಾಡಬಲ್ಲೆನೆಂಬ ಧೈರ್ಯ ಅವರಲ್ಲಿ ಮೂಡಿತು. ಹಣವನ್ನು ಬ್ಯಾಂಕಿನಲ್ಲಿರಿಸುವುದು ಹಳೆಯ ಕಾಲದ ಅವರಿಗೆ ಹೊಸತು. ಹೇಗೂ ನಾಗಪ್ಪಯ್ಯ ತನ್ನ ಬಂಧು, ಅವನೇ ಅನಾಥ ರಕ್ಷಕ. ಅವನ ಕೈಯಲ್ಲಿಟ್ಟು ಈ ಮಗುವನ್ನು ಮುಂದೆ ತರುವ ಭಾರ ನಿನ್ನದು ಎಂದು ಕೇಳಿಕೊಂಡರೆ ಸರಿ! ತಾನೇನೋ ಇಂದೋ ನಾಳೆಯೋ ಹೊರಟು ಹೋಗುವವನು. ನಿನ್ನ ಮಕ್ಕಳಾದರೂ ಈ ಮಗುವನ್ನು ತನ್ನ ಮಕ್ಕಳಂತೆ ನೋಡಿಕೊಳ್ಳಲಿ ಎಂದರು.

ಶಾಲೆಗೆ ಸೇರಿದ ಕಿಟ್ಟು ಎಲ್ಲರಿಗಿಂತಲೂ ಚೆನ್ನಾಗಿ ಕಲಿಯತೊಡಗಿದ. ತನ್ನ ಕೆಲಸವಾಯಿತು, ತಾನಾಯಿತು--ಇದವನ ಮನೋಧರ್ಮ. ಯಾರ ತಳ್ಳಿಗೂ ಅವನು ಹೋಗುತ್ತಿರಲಿಲ್ಲ.

ಹಳ್ಳಿಯ ಶಾಲೆಯಲ್ಲಿ ಐದನೇ ದರ್ಜೆ ಕಲಿತರೆ ಅದೇ ಮಿಡ್ಲ್ ಸ್ಕೂಲು ಪರೀಕ್ಷೆ; ಅಷ್ಟಾದರೆ ಸಾಕು. ಸಾಮಾನ್ಯ ಜ್ಞಾನ ಬರುತ್ತೆ. ಕೈಬರೆಹ ಚೆನ್ನಾಗಿದ್ದರೆ ಎಲ್ಲಾದರೂ ಅಂಗಡಿಯಲ್ಲಿ ಊಳಿಗ ಮಾಡಿಕೊಂಡಿರಬಹುದು. ಹಣೆಬರಹ ಚೆನ್ನಾಗಿದ್ದರೆ ಅದೇ ಸಾಕು ಎಂದುಕೊಂಡರು ರಾಮಯ್ಯ. ಐದನೇ ಕ್ಲಾಸು ಕಲಿತ ಕಿಟ್ಟುವಿಗೆ ಪ್ರಾಯವೇನೋ ಇನ್ನು ಹತ್ತು ದಾಟಿದೆಯಷ್ಟೆ. ಆದರೂ ಮುಂದೆ ಓದುವುದು ಸಾಧ್ಯವಿರಲಿಲ್ಲ.

ಸುಮ್ಮನೆ ಮನೆಯಲ್ಲೇ ಕುಳಿತು ಕಾಲ ಕಳೆಯಬೇಕಾದ ಸಂದರ್ಭ ಬಂತು.

ತಾಯಿಯ ನೆನಪು ತನ್ನ ಜ್ಞಾನ ಬೆಳೆದಂತೆ ಬೆಳೆಯುತ್ತ ಹೋಗಿತ್ತು ಅವನಿಗೆ. ಅನೇಕ ವೇಳೆ ಅವನ ಗೆಳೆಯರು–ನಿನ್ನ ತಾಯಿ ಕ್ರೈಸ್ತಳಾಗಿದ್ದಾಳೆ–ನೀನೂ ಕ್ರೈಸ್ತ ಎಂದು ಮೂದಲಿಸಿದ್ದಾರೆ, ಗೇಲಿ ಮಾಡಿದ್ದಾರೆ. ಯಾವ ಉತ್ತರವನ್ನೂ ಹೇಳಲಾರದೆ ಕಿಟ್ಟು ಅಳುತ್ತ ಕಣ್ಣೀರ ಕೋಡಿ ಹರಿಯಿಸಿದ್ದಾನೆ. ಆರ್ಯ ಸಮಾಜದ ವಿಧಿಯಂತೆ ಕ್ರೈಸ್ತರೂ, ಮಹಮ್ಮದೀಯರೂ ಪುನಃ ಹಿಂದುಗಳಾಗಬಲ್ಲರೆಂಬುದನ್ನು ಆತ ಓದಿ ತಿಳಿದಿದ್ದ. ಅಂದಿನಿಂದ ತನ್ನ ತಾಯಿಯನ್ನು ಪುನಃ ತಮ್ಮ ಜಾತಿಗೆ ತರಬಲ್ಲೆ ಎಂಬ ವಾದ ಅವನಲ್ಲಿ ಮೂಡಿತ್ತು. ಅವಳನ್ನೊಮ್ಮೆ ನೋಡಬೇಕು; ತಮ್ಮ ಜಾತಿಗೆ ಬಾ ಎಂದು ಕೇಳಬೇಕು ಎಂದವನ ಹೃದಯ ತವಕಿಸುತ್ತಿತ್ತು.

ಆದರೆ ಹಾಗೆ ಹೋಗುವುದೆಂದರೆ ಎಲ್ಲಿಗೆ? ಶಾಲೆ ಬಿಟ್ಟು ವಿದ್ಯೆಯನ್ನು ಳಿದು ಹೋದರೆ ತನ್ನ ಗತಿ? ಅದವನಿಗೆ ಸರಿದೋರಲಿಲ್ಲ; ಧೈರ್ಯವೂ ಸಾಲದು. ತಾನೂ ಓದಿ ವಿದ್ಯಾವಂತನಾಗಬೇಕೆಂಬ ಹಂಬಲ ಅವನದು. ಎಂತಲೇ ಎಲ್ಲ ಸಂಕಟಮಯ ನುಡಿಗಳನ್ನು ಕೇಳಿಕೊಂಡು ತಾಯಿಯನ್ನು ಸಾಧ್ಯವಾದಷ್ಟೂ ಮರೆತು ಅವನು ಓದುತ್ತಿದ್ದ. ಈಗ ಓದು ಮುಗಿಯಿತು. ತಾಯಿಯನ್ನು ಕಾಣಬೇಕೆಂಬ ಬಯಕೆ ಬೆಳೆಯಿತು. ಎಷ್ಟು ಕಾಲ ಈ ಹೆರವರ ತುತ್ತಿಗೆ ಕೈನೀಡುತ್ತಿರಬೇಕೆಂಬ ಹಿರಿಯ ವಾದವೂ ಅವನ ಕಿರಿಯ ಮನದಲ್ಲಿ ತಲೆ ಎತ್ತಿತು.

ತಾಯಿಯನ್ನೊಮ್ಮೆ ನೋಡಿ, ಮಾತನಾಡಿಯೇ ಬರಬೇಕೆಂಬ ನಿರ್ಧಾರ ಮಾಡಿಕೊಂಡ ಕಿಟ್ಟು. ಅವಳನ್ನು ಹಿಂದೆ ಕರೆತರುವುದಾಗದಿದ್ದರೆ ಎಲ್ಲಾದರೂ ಕೆಲಸಮಾಡಿಕೊಂಡಿರುವುದೆಂದೂ ನಿರ್ಧರಿಸಿದ. ಆದರೆ ಎತ್ತ ಹೋಗಬೇಕು? ಹೇಗೆ ಹೋಗಬೇಕು ಎಂಬ ಅರಿವಿಲ್ಲ. ತಾಯಿ ಮಂಗಳೂರಲ್ಲಿದ್ದಾಳೆ ಎಂಬುದಷ್ಟೇ ಅವನಿಗೆ ಗೊತ್ತಿತ್ತು. ಆ ದೊಡ್ಡ ಪಟ್ಟಣದ ಯಾವ ಮೂಲೆಯಲ್ಲಿದ್ದಾಳೋ ಯಾರಿಗೆ ಗೊತ್ತು? ಏನೇ ಆಗಲಿ, ತನ್ನ ಜೀವನದಲ್ಲೊಂದು ಸಾಹಸ ಮಾಡಬೇಕೆಂದು ಬಯಸಿದ. ತಾಯಿಯ ಮೇಲಿನ ಮಮತೆ ಅವನನ್ನು ಒಂದೇ ಸಮನೆ ಪೀಡಿಸುತ್ತಿತ್ತು.

ತಾತ ಎಂದಿನಂತೆ ಸಂಜೆಯಹೊತ್ತು ಕಳೆಯಲು ಜೈಮಿನಿ ಓದುತ್ತಿದ್ದರು. ಅರ್ಜುನ ದಿಗ್ವಿಜಯಕ್ಕೆ ಹೊರಟಿದ್ದಾನೆ; ಹಾಗೇ ಮಣಿಪುರಿಗೆ

ಬಂದಿದೆ ಅವನ ತುರಗ. ತರುಣ ಧನುನಿಯು ಬಭ್ರುವಾಹನ ಅದನ್ನು ಕಟ್ಟಿಹಾಕಿದ್ದಾನೆ. ತಾಯಿಗೆ ತನ್ನ ಸಾಹಸದ ಸುದ್ದಿ ತಿಳಿಸಲು ಅತ್ಯಂತ-ಉತ್ಸಾಹದಿಂದ ಹೆಮ್ಮೆಯಿಂದ ಅರಮನೆಯೊಳಗೆ ಬರುತ್ತಿದ್ದಾನೆ. ಇಂದು ತನ್ನ ತಾಯಿ ಅತ್ಯಂತ ಹರುಷದಿಂದ ತನ್ನ ಬೆನ್ನು ತಟ್ಟುತ್ತಾಳೆ; ತನ್ನ ಮಗ ಜಗದೇಕಮಲ್ಲನಾದನೆಂದು ನಲಿಯುತ್ತಾಳೆ; ಎಂದವನ ಮನ ಹೆಮ್ಮೆ ಹುಮ್ಮಸದಿಂದ ತುಂಬಿತ್ತು. ಹಾಗೇ ತಾಯಿಗೆ ವಿಚಾರ ತಿಳಿಸುತ್ತಾನೆ.

ಆದರೆ . . . . . .

ತಾಯಿಯ ಸಮಸ್ಯೆಯೇ ಬೇರೆ. ತನ್ನ ಮಗನ ಶೌರ್ಯಸಾಹಸಗಳನ್ನು ಕಾಣಲು ಅವಳ ಕಣ್ಣುಗಳು ಬಯಸಲಿಲ್ಲ. ಭಾರತದ ಅಸಮಾನ ಗಂಡಿನೊಡನೆ; ಅನೇಕಾನೇಕ ಅರಸರನ್ನು ಗೆದ್ದು ಮುನ್ನಡೆದು ಬಂದ ಅಮಿತ ಪರಾಕ್ರಮಿಯೊಡನೆ ಹೋರಾಡಿ ತನ್ನ ಮಗ ಕೀರ್ತಿಗಳಿಸಲಿ,— ಗೆದ್ದರೆ, ತಾನು ಲೋಕವಿಖ್ಯಾತ ಮಗನನ್ನು ಪಡೆದ ಭಾಗ್ಯಶಾಲಿನಿಯಾಗುತ್ತೇನೆ; ಸೋತರೆ ಅಲ್ಲೂ ಕೀರ್ತಿಗೆ ಕುಂದಿಲ್ಲ—ಎಂಬ ಭಾವ ಅವಳ ಮನದಲ್ಲಿ ಮೂಡಲಿಲ್ಲ. ಈ ವಿಶೇಷವಾರ್ತೆಯನ್ನು ಕೇಳಿ ಅವಳ ಮೊಗ ಅರಳಲಿಲ್ಲ-ಬಾಡಿತು. ಅವಳು ಹಿಗ್ಗಲಿಲ್ಲ-ಕುಗ್ಗಿದಳು. ಮಗನನ್ನು ಬರಸೆಳೆದು ಮೈದಡವಿ ನೀನು ಕೀರ್ತಿಶಾಲಿಯಾಗು, ನಡೆ ಎಂದು ಹರಸಲಿಲ್ಲ. ಬದಲು ಚಿಂತಾಕ್ರಾಂತಳಾದಳು. ಯಾಕೆ ಈ ಚಿಂತೆ ತಾಯಿ ಎಂದು ಪ್ರಶ್ನಿಸಿದ ಜಗದೇಕಮಲ್ಲ ಬಭ್ರುವಾಹನ!

ಪ್ರೇಮ ಸ್ವಾತಂತ್ರ್ಯವನ್ನು ತಾನು ಹೇಗೆ ಉಪಯೋಗಿಸಿಕೊಂಡೆನೆಂಬ ಕತೆ ಹೇಳಿದಳು ಚಿಂತ್ರಾಂಗದಾ. ಪ್ರೇಮ ಸಂಬಂಧ ಪವಿತ್ರವಾದುದು. ಅದು ಪ್ರಾಣಿಗಳಲ್ಲಿನ ಸಂಬಂಧದ ರೂಪವನ್ನು ಮಾನವನಲ್ಲಿ ಪಡೆಯಬಾರದು. ತಾನು ಸ್ವತಂತ್ರಳು; ಆದರೆ, ಆ ಸ್ವಾತಂತ್ರ್ಯ ಇಂದ್ರಿಯ ಚಪಲತೆಯಿಂದ ನಾಶವಾಗಬಾರದು. ಸ್ತ್ರೀ ಸಹಜ ಧರ್ಮಕ್ಕನುಗುಣವಾಗಿ ಜಗದೇಕವೀರ ಪುತ್ರನನ್ನು ಪಡೆಯಬೇಕು; ತಾನು ತಾಯಿಯಾಗಬೇಕು; ಪ್ರೇಮ ಸುಖ, ತಾಯ್ತನದ ಮೇಲ್ಮೆ ತನಗೆ ಅರಿತರೆ ಸಾಕು. ಅದನ್ನೇ ತನ್ನ ಬಾಳಗುರಿಯಾಗಿ ಮಾಡಿಕೊಂಡು ಗಂಡಿನ ಕಾಮತೃಷ್ಣೆ ಪರಿಹರಿಸುವ ಸಾಧನವಾಗಿ ತಾನು ಬಾಳಬಾರದು ಎಂದು ತಿಳಿದಳು ವೀರಪುತ್ರಿ ಚಿತ್ರಾಂಗದಾ. ಎಂತಲೇ ಅಸಮಾನ ವೀರನೆಂದು ಕೀರ್ತಿಪಡೆದ ಅರ್ಜುನನನ್ನು ತನ್ನ

ಅರಮನೆಗೆ ಬರಮಾಡಿಕೊಂಡಳು. ನನಗೊಬ್ಬ ಜಗದೇಕಮಲ್ಲ–ನಿನ್ನಂತಹ ವೀರಪುತ್ರನನ್ನು ಪಡೆವ ಹಂಬಲವಿದೆ ಎಂದಳು ಮನಬಿಚ್ಚಿ. ಚಿನ್ನಕ್ಕೆ ಪುತ್ಥಳಿಯು ಬೆಸುಗೆಯಾದಂತಾಯಿತು. ಅರ್ಜುನ ಚಿತ್ರಾಂಗದೆಯು ಮನ ಒಲಿದು ತಣಿಸಿ ತೆರಳಿದ. ಅವರಿಬ್ಬರು ಮುಂದೆ ಸಂಧಿಸುವ ದಿನ ಇಂದೇ ಆಯಿತು.

ಅರ್ಜುನ; ಅವನಷ್ಟೆ ಸ್ವತಂತ್ರ ಮನೋಭಾವದ, ಆತ್ಮಶಕ್ತಿಯ ಚಿತ್ರಾಂಗದಾ–ಇವರ ಶಕ್ತಿ ಪ್ರತಿಧ್ವನಿಯಲ್ಲಿ ಹರಿಯುತ್ತಿರಲು ಬಭ್ರುವಾಹನ ಕಾಳಗದ ಯೋಚನೆ ಬಿಟ್ಟು ಸಂಧಾನಕ್ಕೆ ಸಿದ್ಧತೆ ಮಾಡಲಾರದಾದ. ಆದರೂ, ತಾಯಿಯ ಆಶಯ, ಅಪ್ಪಣೆ, ಅರ್ಜುನ ತನ್ನ ತಂದೆ ಎಂಬ ಹೆಮ್ಮೆ. ಸಕಲ ಕಪ್ಪಕಾಣಿಕೆಗಳನ್ನೂ ತಂದೆಯ ಪಾದತಳದಲ್ಲಿ ಅರ್ಪಿಸಿ, ತುರಗವನ್ನು ಅವನಿಗೇ ಒಪ್ಪಿಸಲು ನಡೆದ.

ಜಗತ್ತನ್ನೇ ಗೆಲ್ಲಬಲ್ಲೆನೆಂಬ ಅಹಂಕಾರ ಅರ್ಜುನನ ಕಣ್ಣು ಕುರುಡು ಮಾಡಿತ್ತು. ವೀರಾಧಿವೀರನಾದವನು ತನ್ನ ಆತ್ಮಶಕ್ತಿಯ ಪ್ರಭಾವದ ಪ್ರತೀಕವಾಗಿ ತನ್ನೆಡೆಗೆ ಬರುತ್ತಿದ್ದಾನೆ; ಆಶಕ್ತಿಯ ಪರಿಣಾಮದಿಂದಲ್ಲ ಎಂಬುದು ಕಿರೀಟಿಗೆ ತಿಳಿಯಲಿಲ್ಲ. ಆತ ನರನಂತೆ ಹೋರಾಟವನ್ನೇ ಬಯಸಿದ; ಬಭ್ರುವಾಹನನ ಅಂಬಿಗೆ ದಿಂಬಾಗಿ ಮಡಿದ.

ಈ ಕತೆ ಕೇಳುತ್ತ ಕುಳಿತಿದ್ದ ಕಿಟ್ಟುವಿನ ಮುಖದಲ್ಲಿ ನಗೆ ಮಿಂಚಿ ಮಾಯವಾಯಿತು. ಕಣ್ಣೀರು ಹರಿಯುತ್ತಿತ್ತು. ಜೈಮಿನಿಯನ್ನು ವ್ಯಾಸ ಪೀಠದ ಮೇಲಿರಿಸಿಕೊಂಡು, ಯಾವುದೋ ಭಾವನೆಯಲ್ಲಿ ತಲ್ಲೀನರಾಗಿ ರಾಮಯ್ಯ ಓದು ಸಾಗಿಸಿದ್ದರು. ಬಾಗಿದ ತಲೆ ಬಾಗಿಯೇ ಇತ್ತು. ವ್ಯಾಸಪೀಠದ ಪಕ್ಕದಲ್ಲಿ, ನೆಲದ ಮೇಲೆ ಒಂದು ಹನಿ ಕಣ್ಣೀರು ಉರುಳಿ ಅವರ ಮನಸ್ಸನ್ನು ಕಲಕಿತು. ಅವರು ತಲೆ ಎತ್ತಿ ಕಿಟ್ಟುವಿನ ಮುಖ ನೋಡಿದರು.

"ಯಾಕೆ ಮಗು ಅಳುತ್ತೀ"

"ಬಭ್ರುವಾಹನನ ಕತೆ ಕೇಳಿ . . . . . . "

"ಅಂದರೆ . . . . . ."

"ಅವನ ತಾಯಿಯ ಚಿತ್ರ. ಅಷ್ಟೇ ಸ್ವತಂತ್ರಳಾಗಿ ನನ್ನ ತಾಯಿ ಹೊರಟು ಹೋದಳು . . . . . "

"ಅದೆಲ್ಲ ಪುರಾಣ ಕತೆ. ಆ ಶಕ್ತಿ, ಆ ಸಾಹಸ, ಆ ಆತ್ಮತೇಜಸ್ಸು ಇಂದಿನವರಿಗೆಲ್ಲಿ ಬರಬೇಕು?"

"ತಾತ......"

"ಏನು; ಹೇಳು..."

"ನಾನು ಮಂಗಳೂರಿಗೆ ಹೋಗುತ್ತೇನೆ. ಅಮ್ಮನನ್ನು ಹುಡುಕಿ ಒಮ್ಮೆ ನೋಡಿಬರುತ್ತೇನೆ."

"ನಿನಗೆ ಹುಚ್ಚು. ಇನ್ನೂ ಬುದ್ಧಿ ಇಲ್ಲ; ಮೀಸೆ ಬಂದವರಂತೆ ಆಡುತ್ತೀಯ"

"ಈಗೇನೂ ಶಾಲೆಗೆ ಹೋಗುವ ಗೊಂದಲವಿಲ್ಲ. ಸುಮ್ಮನೆ ಕುಳಿತು ಏನು ಮಾಡಲಿ? ಒಮ್ಮೆ ತಿರುಗಾಡಿ ಬರುತ್ತೇನೆ. ಕೆಲಸ ಸಿಕ್ಕಿದರೆ ಅಲ್ಲಿ ನೇರಿಕೊಂಡು ನಿಮಗೆ ಕಾಗದ ಬರೆಯುತ್ತೇನೆ. ತಾಯಿಯನ್ನು ಹುಡುಕಿ ದಂತಾಯಿತು."

"ಅವಳ ಮುಖ ನೋಡುವುದೂ ಪಾಪ-ಮಗು"

"ನಿಜ. ನಿಮಗೆ ಮಗಳು; ನನಗೆ ತಾಯಿ; ಊರಿಗೆಲ್ಲ ಬೇಡವಾದ ಪಾಪಿ"

ರಾಮಯ್ಯನಿಗೆ ಮುಂದೆ ಮಾತನಾಡಲಾಗಲಿಲ್ಲ. ಕಿಟ್ಟುವಿನ ಮಾತು ಅವರನ್ನು ಕಟ್ಟಿಹಾಕಿತು. ಅವನ ಮಾತಿನಲ್ಲೂ ಹುರುಳಿದೆ. ಒಂದು ಕೊಯಿಲಿಗೆ ಒಂದು ಕತ್ತಿ ಎಂದಾಗಬಾರದು. ಒಂದು ತಪ್ಪು ಮಾಡಿದ ಳೆಂದು ನಾನು ಬಾಗಿಯನ್ನು ಮರೆತುಬಿಡಲೇ? ಕೊನೆಯಬಾರಿ ಅವಳ ಸುದ್ದಿ ತಿಳಿಯಲು ಅವರ ಹೃದಯ ಕಾತರಿಸಿತು. ತಾನೂ ಅವನೊಡನೆ ಹೋದರೆ ಹೇಗೆ ಎಂದೊಮ್ಮೆ ಅನಿಸಿತವರಿಗೆ. ಬೇಡ-ಇದರಿಂದ ತೊಡಕೇ ಆಗಬಹುದು. ಈ ಹುಡುಗ ಎಲ್ಲಾದರೂ ಕೆಲಸ ಮಾಡುತ್ತಾನೆ; ಎಲ್ಲಾ ದರೂ ಉಂಡುತಿಂದು ವಿರಮಿಸುತ್ತಾನೆ; ಅದು ತನ್ನಿಂದಾಗದೆಂದು ತಿಳಿದರು.

"ಹಾಗೇ ಮಾಡು ಜಾಗ್ರತೆ! ತೊಂದರೆಯಾದರೆ ಬರೆ. ಬಾಗಿಯನ್ನು ಕಂಡು ಎಲ್ಲ ವಿಚಾರವನ್ನೂ ನನಗೆ ತಿಳಿಸು" ಎಂದರು.

ಕಿಟ್ಟು ಕಣ್ಣೀರನ್ನೊರಸಿಕೊಂಡು ಕುಳಿತ. ಅವನ ಆಶೆ ಫಲಿಸಿತು. ರಾಮಯ್ಯ ಜೈಮಿನಿ ಮುಂದುವರಿಸಿದರು.

# ಆರು



ಬಾಗಿಯ ಒತ್ತಾಸೆ ತಡೆಯಲಾರದೆ, ಅವಳ ಪ್ರೇಮಕ್ಕೆ ಕಟ್ಟುಬಿದ್ದು ಅವಳ ಸಂಕಟವನ್ನು ಕಂಡು ಮರುಗಿ ಅಂತೋನಿ ಅವಳನ್ನು ಮಂಗಳೂರಿಗೆ ಕರೆದು ತಂದ. ಆದರೆ, ಧರ್ಮ ದೇವರುಗಳಿಗೆ ದಾಸನಾಗಿ ಬಾಳಿದ ಅವನಿಗೆ ಧೈರ್ಯ ಸಾಲದು. ತಾನು ಮಾಡಿದ್ದು ಸರಿಯಲ್ಲ ಎಂಬ ಅಳುಕು. -ಅನ್ಯಾಯ ಮಾಡುತ್ತಿದ್ದೇನೆ ಎಂದವನು ತಿಳಿದು ಚಡಪಡಿಸಿದರೂ ಬಾಗಿಯ ಮುಖನೋಡಿದೊಡನೆ ಅದೆಲ್ಲ ಮಾಯವಾಗುತ್ತಿತ್ತು.

ಹೃದಯಗಳೆರಡೂ ಒಂದಾಗಿ ನಿಂತಿವೆ. ನಮ್ಮಷ್ಟೇ ಸುಖಿಗಳು ಈ ಜಗತ್ತಿನಲ್ಲಿ ಇಲ್ಲ ಎಂದರೂ ಸರಿಯೆ. ಎಷ್ಟು ಪ್ರಯತ್ನಿಸಿದರೂ ಅವಳನ್ನು ಮರೆಯುವುದು ತನ್ನಿಂದಾಗುವುದಿಲ್ಲ. ಅವಳಿಗೂ ಹಾಗೇಯೇ. ಈ ತೆರನಾದ ಪ್ರೇಮ, ಸ್ನೇಹಗಳಿಗಿಂತ ಮಿಗಿಲಾದುದು ಯಾವುದಿದೆ. ಆದರೆ . . . ಇಂಥ ಪ್ರೇಮವನ್ನು ಹುಡಿಗೂಡಿಸಿ ಕೃತಕ ಪ್ರೇಮನ್ನೇ ಬೆಳೆಸಲು ಧರ್ಮ ಸಹಕಾರಿಯಾಗುತ್ತಿದೆಯಲ್ಲ ಎಂದು ಅವನಿಗೂ ಅನಿಸದಿರಲಿಲ್ಲ. ಇಂದು ಅವನ ಮುಂದಿರುವ ದಾರಿ ಒಂದೇ-ಬಾಗಿಯನ್ನು ತನ್ನ ಜಾತಿಗೆ ಸೇರಿಸಿಕೊಂಡು ಎಂದೆಂದೂ ಅವಳು ತನ್ನವಳಾಗಿ ಇರುವಂತೆ ಮಾಡಿಕೊಳ್ಳುವುದು. ಅವಳ ಜಾತಿಗೆ ತಾನು ಸೇರುವಂತಿಲ್ಲ. ಸೇರಿದರೂ, ತಾನು ತನ್ನ ಜಾತಿಯಲ್ಲಿ ಅವಳಿಗೆ ಕೊಡಬಹುದಾದ ಸ್ಥಾನಮಾನ ಸಮಾನತೆಗಳನ್ನು ಅವಳ ಜಾತಿ ತನಗೆ ಕೊಡಲಾರದು. ಅವಳನ್ನು ತನ್ನ ಜಾತಿಗೆ ಸ್ವಾಗತಿಸುವುದೇ ಸರಿಯಾದ ಮಾರ್ಗ. ಅವಳು ತನ್ನ ಸಮಾಜದ ಸಾವಿರ ಏಟುಗಳನ್ನು ತಿಂದು ನರಳಿ, ಇನ್ನೂ ಅದನ್ನು ಸಹಿಸುವುದು ಸಾಧ್ಯವಾಗದೆ ತನ್ನನ್ನು ಆಶ್ರಯಿಸಿದ್ದಾಳೆ. ಇಬ್ಬರೂ ಒಪ್ಪಿದ್ದೇವೆ; ಇಬ್ಬರ ಮನವೂ ಒಲಿದಿದೆ-ಇನ್ನೇನು ಬೇಕು-ಎಂದು ಅಂತೋನಿ ಧೈರ್ಯತಂದುಕೊಂಡ.

ಬಾಗಿಯ ತಂದೆ ನಾನು ಅವಳನ್ನು ಒಯ್ದೆನೆಂದು ಪೋಲೀಸರಿಗೆ ದೂರುಕೊಟ್ಟರೆ? . . . ಅದಕ್ಕೂ ಅಡ್ಡಿ ಇದೆ . . . . ಅವಳು ಪ್ರಾಯಕ್ಕೆ ಬಂದವಳು. ಮೇಲಾಗಿ ಜಗತ್ತೇ ಇದಿರಾಗಿ ಬಂದರೂ ಇದಿರಿಸಿ ನಿಲ್ಲಬಲ್ಲಳು. ತನ್ನನ್ನು ಬಿಡುವಂತಿಲ್ಲ. ಏನೇ ಆಗಲಿ, ಮುಂದೆ ಹಜ್ಜೆ ಇರಿಸಿದ ಬಳಿಕ

ಬಂದದ್ದೆಲ್ಲ ಅನುಭವಿಸೋಣವೆಂದು ಆತ ನಿರ್ಧರಿಸಿದ.

"ಇಂದಿಗೆ ನಾನು ಸ್ವತಂತ್ರಳಾದೆ. ಹೊಸ ಧರ್ಮ, ಹೊಸ ಸಮಾಜ, ಹೊಸ ಜೀವನ ನನ್ನದು."

"ಆದರೆ ಇನ್ನೆಷ್ಟು ಎಡರುಗಳು ಕಾದಿವೆಯೊ? ನಿಮ್ಮ ಸಮಾಜದ ದೃಷ್ಟಿಯಲ್ಲಿ ನಾನು ನೀಚನಾಗಬೇಕಾಗಿದೆ".

"ನನ್ನಂತಹ ಸಾವಿರಾರು ಮಂದಿ ಸೇರಿಯೇ ನನ್ನ ಸಮಾಜವಾಗಿದೆ. ಈಗ ನನ್ನನ್ನು ಉದ್ಧರಿಸುತ್ತಿದ್ದೀರಿ. ನನಗೆ-ತನ್ನ ಒಂದು ಭಾಗವಾದ ನನಗೆ-ಬಾಳಲು ದಾರಿಮಾಡಿಕೊಡಲು ಯೋಗ್ಯತೆ ಇಲ್ಲದ ಸಮಾಜದ ನಿಂದೆಗೆ ನೀವೇಕೆ ಭೀತರಾಗಬೇಕು?"

"ನೀನು ಹೆದರಬೇಕಾಗಿಲ್ಲ ನಿಜ, ನಾ ಅಳುಕಲೇಬೇಕು. ಅದು ನನ್ನ ಸಮಾಜವಲ್ಲ ಎಂಬುದರಿಂದ."

"ನನ್ನನ್ನು ಉದ್ಧರಿಸಿದ ಪುಣ್ಯವನ್ನು ನೆನೆದು ಅದನ್ನು ಮರೆತುಬಿಡಿ."

"ಅಷ್ಟುದೂರ ಯೋಚಿಸಿಯೇ ನಿನ್ನನ್ನು ಕರೆದು ತಂದಿದ್ದೇನೆ. ನಿನ್ನ ವರ್ತನೆಗೆ ನೀನೂ ನಿನ್ನ ಸಮಾಜವೂ ಕಾರಣ,–ನಾನಲ್ಲ–ಎಂದು ನಿಮ್ಮವರು ತಿಳಿದರೆ ಸಾಕು.

"ಇಂದಲ್ಲದಿದ್ದರೆ ನಾಳೆಯಾದರೂ ತಿಳಿಯುತ್ತಾರೆ".

"ನೀನೂ ನೀ ಹಿಡಿದ ದಾರಿಯ ಬಗೆಗೆ ಯೋಚಿಸಿನೋಡು. ಉದ್ವೇಗಕ್ಕೆ ಆಸ್ಪದವೀಯಬೇಡ. ಮುಂದೆ ಕೊರಗಬೇಕಾದೀತು."

"ನೂರು-ಬಗೆಯಾಗಿ ಯೋಚಿಸಿ ಈ ದಾರಿ ಹಿಡಿದಿದ್ದೇನೆ."

"ಯಾವ ಧರ್ಮವೂ ಶುಚಿಯಾಗಿಲ್ಲ. ಯಾವ ಜಾತಿಯೂ ನಿರ್ಮಲವಾಗಿಲ್ಲ. ಆದರೆ, ಅಂಥ ಜಾತಿ-ಧರ್ಮಗಳಲ್ಲಿ ನಾವು ಶುಚಿಯಾಗಿರಬೇಕು."

"ಅದು ಕಠಿಣ ದಾರಿ, ಸಾಧ್ಯವಾಗದ ಪ್ರಯತ್ನ".

"ಸಾಧ್ಯ ಮಾಡಿಕೊಳ್ಳಬೇಕು. ನನ್ನ ಧರ್ಮದಲ್ಲಿ ಸಾವಿರ ಕುಂದುಗಳಿವೆ. ಅದು ದಾಕ್ಷಿಣ್ಯಗಳಿಗೆ, ಅನುಕೂಲಗಳಿಗೆ ಕಟ್ಟು ಬಿದ್ದು ಹಲವು ದಾರಿ ಹಿಡಿದಿದೆ. ಅದರ ವಿಚಿತ್ರ ಕಟ್ಟುಕಟ್ಟಳೆಗಳಿಗೆ ನೊಂದು ಹಾಳಾಗಲಿ ಈ ಧರ್ಮ ಎನ್ನುವವರು ನನ್ನಂತಹ ಸಾವಿರ ಮಂದಿ. ಆದರೂ, ಆ ಧರ್ಮವನ್ನು ಕಾಲಿಂದ ಒದ್ದು ದೂರಹೋಗುವ ಧೈರ್ಯ ನನಗಿಲ್ಲ."

"ಇರಬಹುದು. ನಾನಂತೂ ಧೈರ್ಯತಂದುಕೊಂಡು ಧುಮುಕಿ

ದ್ದೇನೆ. ಧರ್ಮಕ್ಕಾಗಿ ನಾವು ಹುಟ್ಟಿದ್ದೇವೆಯೇನು? ನಮಗಾಗಿ ಧರ್ಮ ಹುಟ್ಟಿದೆ. ಆದರೆ, ಆ ಧರ್ಮವೇ ಅದಕ್ಕಾಗಿ ನಾವು ಹುಟ್ಟಿದ್ದೇವೆ ಎಂದು ತಿಳಿದು ನಮ್ಮನ್ನು ಪಶುಪ್ರಾಣಿಗಳಿಗಿಂತಲೂ ಕೀಳಾಗಿ ಕಂಡಾಗ, ನಾವು ಕಲ್ಲುಗೊಂಬೆಗಳೆಂದು ಭಾವಿಸಿದಾಗ, ಅಂಥ ಧರ್ಮಕ್ಕೆ ನಾವು ತಲೆಬಾಗ ಬೇಕಾಗಿಲ್ಲ. ಅದಕ್ಕೆ ನಮ್ಮ ಮೇಲೆ ಯಾವ ಅಧಿಕಾರವೂ ಇಲ್ಲ."

"ಆದರೆ, ನಮ್ಮ ಧರ್ಮವನ್ನು ಆಶ್ರಯಿಸಲು ನೀನು ಬಂದಿದ್ದೀಯಾ?"

"ನಿಜ! ಅದು ನನಗೆ ಸುಖವಾಗಿ ಬಾಳಲು ಆಸ್ಪದವೀಯಬಹು ದೆಂದು ನಂಬಿ, ನನ್ನ ಜೀವನಕ್ಕೆ, ಸುಖಕ್ಕೆ, ಸ್ವಾತಂತ್ರ್ಯಕ್ಕೆ ಅದೂ ಅಡ್ಡಿ ಬಂದರೆ ನನಗೆ ಆ ಧರ್ಮವೂ ಏಕೆ ಬೇಕು?"

ಮುಂಜಾವದ ನಸು ಬೆಳಕಿನಲ್ಲಿ ಎಡವುತ್ತ ತಡವರಿಸುತ್ತ ಇಬ್ಬರೂ ನಡೆಯುತ್ತಿದ್ದರು. ತಂಗಾಳಿ ಬೀಸುತ್ತಿತ್ತು. ಆಗೊಮ್ಮೆ ಈಗೊಮ್ಮೆ ಹಳ್ಳಿಯ ಶಾಂತತೆಯನ್ನು ನಾಯಿಗಳು ಭಂಗಪಡಿಸುತ್ತಿದ್ದುವು. ಇನ್ನೇನು, ಬೆಳಗಾಯಿತು ಎಂದು ಕೋಳಿ ಕೂಗಿ ಹೇಳುತ್ತಿತ್ತು. ತಮ್ಮನ್ನು ಯಾರೂ ಕಾಣಲಾರರು, ಕಂಡರೂ ಗುರುತಿಸಲಾರರೆಂಬ ಧೈರ್ಯವೊಂದು ಇಬ್ಬ ರಲ್ಲೂ ಹುರುಪು ಹುಟ್ಟಿಸಿತ್ತು. ಬೆಳಕು ಹರಿಯುವ ವೇಳೆಗಾಗಲೇ ಆರು ಮೈಲಿಗಳ ದೂರ ನಡೆದು ಬಂದಿದ್ದರು ಅವರು. ಅಷ್ಟರಲ್ಲಿ ಮಂಗಳೂರಿಗೆ ಹೋಗುವ ಮೋಟಾರು ಬಂತು. ಕೊನೆಯ ಬಾರಿಗೊಮ್ಮೆ ಸುತ್ತಲೂ ನೋಡಿ ಇಬ್ಬರೂ ಇದನ್ನೇರಿದರು.

ಬಂದ ಹೊಸದರಲ್ಲಿ ಕೆಲದಿನ ಗೆಳೆಯನೊಬ್ಬನ ಮನೆಯಲ್ಲಿ ಅಂತೋನಿ ಬಾಗಿಯೊಡನೆ ಉಳಿದುಕೊಂಡ. ತನ್ನ ವಿವಾಹದ ವ್ಯವಸ್ಥೆ ಯನ್ನು ಅವನೇ ಮಾಡಿಕೊಳ್ಳಬೇಕಾಯಿತು. ಬಾಗಿ ಶಾಸ್ತ್ರವಿಧಿಯಂತೆ ಐಲೀನ್ ಆಗಿ, ಅಂತೋನಿ ಸೋಜರ ಸಹಧರ್ಮಿಣಿಯಾದಳು. ಬೆಂದೂರು ಕಾನ್ವೆಂಟಿನ ಹಿಂಗಡೆ ಒಂದು ಪುಟ್ಟ ಮನೆ ಗೊತ್ತುಮಾಡಿಕೊಂಡು ತನ್ನ ಹೊಸ ಸಂಸಾರ ನಿರ್ವಹಿಸತೊಡಗಿದ ಅಂತೋನಿಗೆ ಅವನ ಉದ್ಯೋ ಗವೂ ದೊರೆಯಿತು.

ಕ್ರೈಸ್ತರ ಜಾತಿಗೆ ಸೇರಿದ ಬಾಗಿಗೆ ಅವರ ನಡೆ ನುಡಿ ಒಂದಿಷ್ಟೂ ಒಗ್ಗಿರಲಿಲ್ಲ. ಅಂತೋನಿಯ ಪತ್ನಿಯಾದರೂ ಮಾಂಸ ತಿನ್ನುವುದಂತೂ ಅವಳಿಂದ ಸಾಧ್ಯವಾಗದ ಕೆಲಸವಾಯಿತು. ಜಾತಿಗೆ ಸೇರಿದ ಶುಭದಿನ

ಪ್ರಯುಕ್ತ ಮಾಂಸ ತಿನ್ನಬೇಕೆಂದು ಅಂತೋನಿ ಒತ್ತಾಯಪಡಿಸಿದ. ತಾನೇ ಒಂದು ತುಂಡನ್ನು ಪ್ರೀತಿಯಿಂದ ಅವಳ ಬಾಯಲ್ಲಿರಿಸಿದ. ಆದರೆ, ಅದು ಹೊಟ್ಟೆಯೊಳಗೆ ಹೋಗುವ ಬದಲು, ಹೊಟ್ಟೆಯಲ್ಲಿದ್ದುದನ್ನು ಕರೆದು ಕೊಂಡು ಹೊರಹಾರಿತು. ತನ್ನ ಮನದ ತೃಪ್ತಿಗಾಗಿ ಪೇಟೆಯಿಂದ ಕಟ್ಲೆಟ್ ತಂದು ಪತ್ನಿಗೆ ತಿನಿಸಿದ. ಅದು ತರಕಾರಿಯದೆಂದು ಹೇಳಿ ಅವಳನ್ನೊಪ್ಪಿ ಸಿದ. ಆದರೆ, ಮೂರು ದಿನಗಳ ಬಳಿಕ ತಾನು ಮಾಂಸ ತಿಂದೆನೆಂದು ತಿಳಿದಾಗ ಐಲೀನಾ ತುಂಬ ಚಡಪಡಿಸಿದಳು. ಆದರೆ ಪರದೇಶಿ ಹೆಂಡ ಕುಡಿಯುವುದು ಅವಳಿಗೆ ಕಷ್ಟವಾಗಲಿಲ್ಲ. ಅದರ ರುಚಿಯನ್ನಷ್ಟೇ ನೋಡಿದಳು.

ಊಟ-ಉಡಿಗೆಯ ವಿಚಾರವೆಲ್ಲ ವೈಯಕ್ತಿಕ. ಎಂತಲೇ ಅದಾ ವುದೂ ಅವಳನ್ನು ಬಂಧಿಸಲಿಲ್ಲ; ಬೇಸರಿಸಲಿಲ್ಲ. ಸಮಾಜವಾಗಲೀ, ಧರ್ಮ ವಾಗಲೀ ಬೇರಾವ ವಿಷಯದಲ್ಲೂ ಅವಳನ್ನು ಕಾಡಲು ಮುಂದಾಗಲಿಲ್ಲ. ಪ್ರತಿ ಭಾನುವಾರ ಪ್ರಾರ್ಥನೆಯ ಪುಸ್ತಕವನ್ನು ಹಿಡಿದುಕೊಂಡು ಚರ್ಚಿಗೆ ಹೋಗಿ ಬರುತ್ತಿದ್ದಳು. ಯಂತ್ರದಂತೆ ಈ ಕೆಲಸ ನಿರ್ವಹಿಸುತಿದ್ದಳೇ ವಿನಾ ಅವಳಿಗೆ ಪ್ರಾರ್ಥನೆಯನ್ನು ಹೇಳುವುದು ತಿಳಿದಿರಲಿಲ್ಲ; ಅದರ ಅರ್ಥವೂ ಆಗಿರಲಿಲ್ಲ. ಆದರೆ ಅಂತೋನಿ ಮಾತ್ರ ಅವಳ ನಡತೆಯಿಂದ ಪೂರ್ಣ ತೃಪ್ತನಾದ. ತನಗಾಗಿ ಇದನ್ನೆಲ್ಲ ನಡೆಸುತಿದ್ದಾಳೆ; ಈ ಒಲ್ಲದ ಕಾರ್ಯ ಸಾಧಿಸುತ್ತಿದ್ದಾಳೆ; ಕಷ್ಟ ಅನುಭವಿಸುತ್ತಿದ್ದಾಳೆ ಎಂದವನಿಗೆ ಸಂತೋಷವಾಯಿತು. ಅವಳಲ್ಲಿನ ಅವನ ಅಭಿಮಾನ, ಪ್ರೇಮ ನೂರು ಮಡಿ ಬೆಳೆಯಿತು. ಯಾವ ವಿಚಾರದಲ್ಲೂ ಅವಳನ್ನು ಒತ್ತಾಯಪಡಿಸ ಲಿಲ್ಲ. ತನಗೆ ಮಾಂಸ ತಿನ್ನಬೇಕು; ಕುಡಿಯಬೇಕು ಎಂದು ತೋರಿದಾಗ ಊರಲ್ಲಿ ಆ ಕಾರ್ಯ ಮುಗಿಸಿಯೇ ಮನೆಗೆ ಮರಳುತ್ತಿದ್ದ. ನಾನು ಮಾಂಸ ತಿನ್ನುತ್ತೇನೆ; ನೀನು ತರಕಾರಿ ತಿಂದು ಬಿಡು ಸರಿಯಾಗುತ್ತೆ ಎಂದು ಐಲೀನಾಳನ್ನು ಪರಿಹಾಸ್ಯ ಮಾಡುತ್ತಿದ್ದ. ನಮ್ಮ ಮಗುವಿಗೆ ನನ್ನ ದೇಹ ನಿನ್ನ ಬುದ್ಧಿ ಬರುತ್ತೆ ಎಂದು ನಗುತ್ತಿದ್ದ

ಎಂದಾದರೊಮ್ಮೆ ಹಬ್ಬದ ದಿನಗಳಲ್ಲಿ ತುಂಬ ಕುಡಿದು ನಲಿಯು ವುದು ಅಂತೋನಿಯ ಸ್ವಭಾವ. ಆ ದಿನಗಳಲ್ಲಿ ಮನೆಯನ್ನಾತ ತಲಪು ತ್ತಾನೆ ಎಂಬ ಭರವಸೆ ಕಡಿಮೆ. ತಲಪಿದರೂ ಆಗ ಮಧ್ಯರಾತ್ರಿಯಾಗಿ

ರುತ್ತೆ. ಕದ ತೆರೆಯಲು ಐಲೀನಾ ತಡಮಾಡಿದಳೆಂದರೆ ಆ ರಾತ್ರಿ ಅವಳ ಕತೆ ಮುಗಿದಂತೆಯೇ. ಕೈ ಸೋಲುವ ವರೆಗೂ ಹೊಡೆದುಬಿಡುತ್ತಿದ್ದ. ಮುಂಜಾನೆ ತಾನು ಮಾಡಿದ ಅಕೃತ್ಯಕ್ಕಾಗಿ ಕ್ಷಮೆ ಯಾಚಿಸಿ ಅವಳ ಆರೈಕೆಗೂ ಮುಂದಾಗುತ್ತಿದ್ದ. ಇನ್ನು ಎಂದೂ ಹೀಗೆ ಮಾಡುವುದಿಲ್ಲೆಂದು ಆಣೆ ಇಡುತಿದ್ದ. ಎಂತಲೇ ಅಂತೋನಿಯ ಪ್ರಹಾರ, ಬೈಗಳು ಐಲೀನಾಳಿಗೆ ಮನನೋಯಿಸಲಿಲ್ಲ. ಅವನ ಹೃದಯದ ಅರ್ಥ ಅವಳಿಗಾಗಿತ್ತು. ಅವನಿಗೆ ತನ್ನಲ್ಲಿರುವ ಪ್ರೇಮದ ಅಗಾಧತೆಯ ಅರಿವಾಗಿತ್ತು. ಅವಳ ಈ ಕ್ಷಮಾಗುಣ, ಸಹನೆ, ತಾಳ್ಮೆ ಕ್ರಮೇಣ ಅಂತೋನಿಯನ್ನು ಹದಗೊಳಿಸಿದುವು. ಯಾವುದೋ ಧರ್ಮ ಜಾತಿಗಳ ಮಡಿಲಿಂದ-ತನ್ನ ಬಂಧು ಬಳಗ ಸಮಾಜ ಎಲ್ಲವನ್ನೂ ಅಗಲಿ ತನ್ನನ್ನು ನಂಬಿ ಬಂದ ಇವಳನ್ನು ಶಿಕ್ಷಿಸಬಾರದೆಂದು ಅವನ ಮನ ಕೂಗಿ ಹೇಳುತ್ತಿತ್ತು. ಈ ಭಾವ ಮೂಡಿದಾಗಲೆಲ್ಲ ಇಡೀ ದಿನ ತನ್ನ ಉದ್ಯೋಗವನ್ನು ಮರೆತು ಐಲೀನಾಳೊಡನೆ ಆನಂದದಿಂದ ಕಾಲ ಕಳೆಯುತ್ತಿದ್ದ. ಹಗಲಿರುಳು ಪತಿ ತನ್ನ ಬಳಿಯೇ ಇದ್ದರೂ ಸಾಲದು ಎಂಬ ಐಲೀನಾ ಇಂತಹ ದಿನಗಳಿಗಾಗಿ ಕಾದಿರುತ್ತಿದ್ದಳು. ತನ್ನ ಪ್ರೇಮಪಾಶದಿಂದ ಅಂತೋನಿಯನ್ನು ಬಂಧಿಸಿ ಅವನನ್ನು ಸರಿದಾರಿಗೆ ತರಲು ಹೋರಾಡುತ್ತಿದ್ದಳು. ಅವನ ಕುಡಿತವೂ ದಿನಕಳೆದಂತೆ ಕಡಿಮೆಯಾಗತೊಡಗಿತು.

ಬಾಗಿ-ಐಲೀನ ಆಗಿ ಮೂರು ವರ್ಷ ಸಂದಿತು. ಹೊಸ ವಾತಾವರಣ ಅವಳಿಗೆ ಒಗ್ಗಿಹೋಗಿದೆ, ಹಳೆಯ ತನ್ನ ಸಮಾಜದ ಮರವೆಯಾಗಿದೆ. ಮೊದಮೊದಲು ಯಾರಾದರೂ ಮುದುಕರನ್ನು ಕಂಡಾಗಲೆಲ್ಲ ತನ್ನ ತಂದೆಯ ನೆನಪಾಗುತ್ತಿತ್ತು. ಅವರೆಷ್ಟು ಪ್ರೀತಿಯಿಂದ ತನ್ನನ್ನು ಸಾಕಿ ಸಲಹಿದರು, ಎಷ್ಟು ಕಷ್ಟಪಟ್ಟು ತನಗೆ ವಿವಾಹ ಮಾಡಿಸಿದರು ಎಂದೆಲ್ಲ ನೆನೆದುಕೊಂಡು ಹಳೆಯ ಚಿತ್ರಗಳನ್ನು ಕಾಣುತಿದ್ದಳು. ಮಕ್ಕಳನ್ನು ಕಂಡೊಡನೆಯೇ ಯೋಚನೆಗಿಂತ ಹೆಚ್ಚಾಗಿ ದುಃಖ ಉಕ್ಕಿಬರುತ್ತಿತ್ತು ಅವಳಿಗೆ. ನನ್ನ ಮಗುವಿನ ಮೇಲೆ ನನಗೆ ಅಧಿಕಾರವಿದ್ದೇ ಇದೆ. ನಾನವನನ್ನು ಕರೆದು ತರಲೇ? ಆ ಹಸುಳೆ ಎಂದೆಂದಿಗೂ ನನ್ನದೇ. ನಾಕರೆದರೆ . . ನಿಜ. ಮಗು ಕಿಟ್ಟು ಕೂಡಾ ನಿಮಿಷವೂ ನನ್ನನ್ನು ಬಿಟ್ಟವನಲ್ಲ. ದೂರ ನಿಂತು ಬಾ ಎಂದರೂ ಓಡಿ ಬಂದಾನು ಎಂದು ಕಸಿವಿಸಿಗೊಳ್ಳು

ತ್ತಿದ್ದಳು. ಕಣ್ಣೀರು ಹರಿಸುತ್ತಿದ್ದಳು. ಇನ್ನೊಮ್ಮೆ ನಾನೇಕೆ ಈ ಮಗುವನ್ನು ನನ್ನ ದಾರಿಗೆ ಎಳೆಯಲಿ? ಅದನ್ನೂ ಮುಂದೆ ದಿಕ್ಕಿಲ್ಲದೆ ಪಾತರಿಲ್ಲದೆ ಬಾಳು ವಂತೆ ಮಾಡಲಿ. ನನ್ನ ತಂದೆಯು ಊರುಗೋಲಾಗಿ ಬಾಳಿದೆ ಅದು. ಅವರ ಬೆಂಬಲಕ್ಕಾದರೂ ಇರಲಿ. ಈಗ . . . ಆರು ವರ್ಷ ಕಳೆದಿದೆ ನನ್ನ ಕಿಟ್ಟುಗೆ. ತನ್ನ ತಾತನಿಗೆ ಎಷ್ಟೆಲ್ಲ ಸಹಾಯ ಮಾಡುತ್ತಿರಬಹುದು ಎಂದು ತೃಪ್ತಳಾಗುತಿದ್ದಳು. ಮಗು ತನ್ನ ಸುಖಕ್ಕೆ ಅಡ್ಡಿಯಾಗಿದೆ ಎಂತ ತಿಳಿದ ಹೃದಯವೇ ಇಂದು ತಾಯ್ತನದ ತಿರುಳಿನ ಪ್ರತೀಕವಾಗಿ ಆ ಹಸುಳೆಗಾಗಿ ಹಾತೊರೆಯಿತು. ಇದ್ದಾಗ ಬೇಡವಾಯಿತು; ಇಲ್ಲದಾಗ ಬಯಸಿತು. ಬಯಕೆ ಈಡೇರಿತೇನೋ? ಐಲೀನಾ ಗರ್ಭವತಿಯಾದಳು. ಹೆಣ್ಣು ಕೂಸನ್ನು ಹೆತ್ತಳು.

ತನ್ನ ಹೊಸ ಬಾಳಿನ ಪೂರಕವಾದ ಹಸುಳೆಯನ್ನು ಕಣ್ಣುಗೊಂಬೆ ಯಂತೆ ಕಾದುಕೊಂಡು ಬಂದಳು ಐಲೀನಾ. ತನ್ನ ಮತ್ತು ಅಂತೋನಿಯ ಜೀವನವನ್ನು ಅಚ್ಚಳಿಯದೆ ಉಳಿಸುವ ತಮ್ಮ ಆತ್ಮಗಳನ್ನು ಬೆಸುಗೆ ಮಾಡುವ ತಂತುವಿದೆಂದು ಸಲಹಿದಳು. ರೂಬಿ ಅವರ ಬಾಳಿನ ಬಂಗಾರ ವಾಯಿತು. ರೂಬಿ ಸಂಸಾರವನ್ನು ಸೇರಿದಂದಿನಿಂದ ಐಲೀನಾ ತನ್ನ ಹಳೆಯ ಜೀವನವನ್ನೆಲ್ಲಾ ಮರೆತಳು. ಈ ಹೊಸ ಧರ್ಮ, ಸಮಾಜ, ಜೀವನ ಅವಳಿಗೆ ಹೊಸತಾಗೇ ಉಳಿಯಲಿಲ್ಲ—ಹಳೆಯದಾಗೇ ಕಂಡಿತು. ವರುಷ ಗಳೂ ಹಾಗೇ ಉರುಳಿದುವು.

ನೀರಿನಿಂದ ಮೇಲಕ್ಕೆ ಬಿದ್ದ ಮೀನಿನಂತಾದವಳು ಪುನಃ ನೀರಿಗೇ ಬಿದ್ದ ಅನುಭವ ಪಡೆದಳು. ದಿನಕಳೆದಂತೆ ಹೊಸ ಸಮಾಜ ಅವಳ ಬಗೆಗೆ ಅಧಿಕ ಆದರ ವ್ಯಕ್ತಪಡಿಸಿತು. ಅವಳ ಗೆಳತಿಯರ ಸಂಖ್ಯೆ ಬೆಳೆಯಿತು. ಅವಳ ಗುಣಕ್ಕೆ ಸೋತು ಅನೇಕರು ಅವಳ ಪೂರ್ವಕತೆಯನ್ನು ಮರೆತರು. ಈ ಆದರ, ಈ ಬಳಗ ಅವಳನ್ನು ಹಳೆಯ ಕತೆಗಳನ್ನೆಲ್ಲ ಪೂರ್ಣವಾಗಿ ಮರೆಯುವಂತೆ ಮಾಡಿದುವು. ಹೊಸ ಧರ್ಮದ ಮೇಲಿನ ಅವಳ ಅಭಿ ಮಾನ ಅತ್ಯಂತ ಅಧಿಕವಾಗಿ ಬೆಳೆಯಿತು. ತನ್ನ ಸಮಾಜ ತನ್ನ ಇಂದಿನ ಪರಿಸ್ಥಿತಿಯಲ್ಲಿ ಹಜ್ಜೆ ಹಜ್ಜೆಗೂ ಮೂದಲಿಸಿ, ಟೀಕಿಸಿ, ಹಿಂಸಿಸುತಿತ್ತು. ಗುಪ್ತವಾಗಿ, ಗಂಡನಿದ್ದಂತೆ ವ್ಯಭಿಚಾರದ ಹಾದಿ ಹಿಡಿದವರೆಷ್ಟು ಮಂದಿ ಇಲ್ಲ? ಧನಿಕ ಗಂಡನಾದವನು ಹೊರಗೆ ಬಲೆಬೀಸಲು ನಡೆದಾಗ ಮನೆ

ಯಾಕೆ, ಮನೆಯ ಆಳುಗಳನ್ನೇ ಅಪ್ಪಿಕೊಂಡ ಕತೆಯೆಷ್ಟಿಲ್ಲ? ಆದರೂ ತನ್ನ ಸಮಾಜ ಈ ಬಗೆಗೆ ಛೀ ಮಾರಿ ಹಾಕದಿದ್ದರೂ, ತನ್ನಂತಹರನ್ನು ಸಹಿಸದು. ಆದರೆ ಈ ಹೊಸಧರ್ಮದಲ್ಲಿ ಹೊಸ ದೃಷ್ಟಿ ಇದೆ. ತನ್ನ ಬಗೆಗೆ ಆದರ ಇದೆ, ಕರುಣೆ ಇದೆ, ಸಹಾನುಭೂತಿ ಇದೆ ಎಂದವಳಿಗೆ ಅರಿವಾಯಿತು; ಅನುಭವವೂ ಆಯಿತು.

ವರುಷಗಳೂ ಉರುಳಿದುವು. ಅದೆಷ್ಟು ಬೇಗ ರೂಬಿಗೆ ಆರು ವರ್ಷವಾಯಿತೆಂಬುದೇ ಅವಳಿಗೆ ಆಶ್ಚರ್ಯವಾಯಿತು. ದಿನಗಳನ್ನು ವರ್ಷವಾಗಿ ಕಂಡ ಐಲೀನಾ ಈಗ ವರ್ಷಗಳನ್ನು ದಿನಗಳಾಗಿ ಕಂಡಳು. ರೂಬಿಯ ಆರನೇ ವರ್ಷದ ಹುಟ್ಟುಹಬ್ಬವನ್ನು ವೈಭವದಿಂದ ಆಚರಿಸಿದಳು. ಆ ವರ್ಷ ಅಂತೋನಿ ಕೈತುಂಬ ಕ್ರಿಸ್‌ಮಸ್ ಉಡುಗೊರೆ ತಂದುಕೊಟ್ಟ. ತನ್ನ ಕಂಪೆನಿಯುಲ್ಲಿ ಮೂರು ತಿಂಗಳ ಸಂಬಳ ಬೋನಸ್ ರೂಪದಿಂದ ದೊರೆತಿತ್ತು ಅವನಿಗೆ. ಜತೆಗೆ ಸಂಬಳವೂ ಹೆಚ್ಚಿತ್ತು. ಇದೆಲ್ಲ ರೂಬಿಯ ಭಾಗ್ಯ; ಆಕೆ ಮನೆಗೆ ಬಂದ ಲಕ್ಷಣ ಎಂದು ಎಲ್ಲರೂ ನಲಿದರು. ಅಂದು ಹಬ್ಬವನ್ನಾಚರಿಸಲೆಂದು ತಂದ ವೈನ್‌ನಲ್ಲಿ ಐಲೀನಳಿಗೂ ಕೊಂಚ ಕುಡಿಸಲು ಮಾತ್ರ ಅಂತೋನಿ ಮರೆಯಲಿಲ್ಲ.

ಅದೊಂದು ಭಾನುವಾರ ಎಂದಿನಂತೆ ಐಲೀನಾ ತನ್ನ ಮಗಳೊಂದಿಗೆ ಚರ್ಚಿಗೆ ಹೋಗಿ ಹಿಂತಿರುಗಿದಳು. ಮನೆಯ ಬಾಗಿಲಲ್ಲಿ ಯಾರೋ ಒಬ್ಬ ಹುಡುಗ ಕಾದಿದ್ದ. ಸುಮಾರು ೧೦-೧೧ ವರ್ಷ ಪ್ರಾಯವಿರಬಹುದೇನೊ. ಆದರೆ ಆ ಮುಖ ಎಲ್ಲೋ ನೋಡಿದ ನೆನಪನ್ನು ಅವಳಲ್ಲಿ ಹುಟ್ಟಿಸುತ್ತಿತ್ತು. ಐಲೀನಾ ತಲೆಯ ಮೇಲೆ ಬಲೆಯಂತಹ ಬಟ್ಟೆಯೊಂದನ್ನು ಹಾಕಿಕೊಂಡಿದ್ದಳು. ಅವಳ ಜತೆಗಿದ್ದ ರೂಬಿ ಲಂಗ ತೊಟ್ಟು ತಾನೂ ಬಿಳಿಯ ಬಲೆಯಂತಹ ಬಟ್ಟೆಯನ್ನು ತಲೆಯ ಮೇಲೆ ಹಾಕಿಕೊಂಡಿದ್ದಳು. ಐಲೀನಾ ಮನೆಯ ಮೆಟ್ಟಿಲೇರುತ್ತಿದ್ದಂತೆ ಆ ಬಾಲಕ ಅವಳನ್ನೇ ದಿಟ್ಟಿಸಿ ನೋಡುತ್ತಿದ್ದ. ಅವಳೂ ಅವನೆಡೆ ನೋಡುತ್ತ ಮನೆಯ ಜಗಲಿಯನ್ನೇರಿದಳು. ಅಂತೋನಿ ಎಂದಿನಂತೆ ಮುಂಜಾವದಲ್ಲೇ ತನ್ನ ಕೆಲಸಕ್ಕೆ ಹೋಗಿದ್ದ. ಎಂತಲೇ ಮನೆಯ ಬಾಗಿಲನ್ನು ಬೀಗ ಅಲಂಕರಿಸಿತ್ತು. ಐಲೀನಾ ಬೀಗ ತೆಗೆಯಲಾರಂಭಿಸಿದಳು.

ಹುಡುಗ ಅವಳ ಹಿಂದೆಯೇ ಜಗಲಿಯನ್ನೇರಿ ಕೇಳಿದ "ಅಂತೋನಿ ಸೋಜರ ಮನೆ ಇದೇ ಏನು?"

ಬಾಗಿಲನ್ನು ದೂಡಿ ತೆರೆಯುತ್ತಿದ್ದಂತೆ ತಿರುಗಿ ನೋಡಿ ಐಲೀನಾ ಕೇಳಿದಳು—"ಅಂದರೆ . . . . . ಅವರಿಗೆಲ್ಲಿ ಕೆಲಸ?"

"ಬಸ್ ಡ್ರೈವರ್."

"ಹೌದು. ಯಾಕೆ? ನೀನು ಯಾರು? ಅವರಿಲ್ಲ . . . . . . ಸಂಜೆ ಬರುತ್ತಾರೆ."

ಹುಡುಗ ಐಲೀನಾಳ ಇದಿರು ನಿಂತು ಅವಳನ್ನೇ ದಿಟ್ಟಿಸಿ ನೋಡುತ್ತಲಿದ್ದ. ಅವಳೂ ಆಶ್ಚರ್ಯದಿಂದ ಈ ಹುಡುಗನ ವಿಚಿತ್ರ ನೋಟವನ್ನೇ ಗಮನಿಸುತ್ತಿದ್ದಳು. ಸರಿ! ಒಳಕ್ಕೆ ನಡೆಯೋಣ ಎಂದು ಆಕೆ ತಿರುಗುವಷ್ಟರಲ್ಲಿ ಹುಡುಗ ಅವಳ ಕಾಲಿಗೆ ಬಿದ್ದ. ಐಲೀನಾ ಬೆಚ್ಚಿ ಹಿಂದಕ್ಕೆ ಸರಿದಳು. ಇದೇನು ಅವಾಂತರವೆಂದೇ ಅವಳಿಗೆ ತಿಳಿಯಲಿಲ್ಲ. ಆದರೂ, ಮನಸ್ಸಿನಲ್ಲಿ ಏನೋ ಒಂದು ನೆನಪು ಅಸ್ಪಷ್ಟವಾಗಿ ನಿಂತು ಅವಳನ್ನು ಕಾಡುತ್ತಿತ್ತು. ಅವಳು ಬಾಗಿ ಹುಡುಗನನ್ನೆತ್ತಿದಳು. ಅವನ ಕಣ್ಣುಗಳಲ್ಲಿ ನೀರು ತುಂಬಿತ್ತು.

"ಯಾರು . . . . . . . . . . ಏನಿದು?"

"ನೀವು ಭಾಗೀರತಿ ಅಮ್ಮ . . . . . ಅಲ್ಲವೇ?

"ಅಂತೋನಿ ಸೋಜರನ್ನು ಮದುವೆಯಾಗಿ ಕ್ರೈಸ್ತರಾದಿರಿ."

"ನೀನು . . . . . . . ."

"ನಿಮ್ಮ ಮಗ . . . . . . ಕಿಟ್ಟು . . . . . . "

ತುಂಬಿದ ಮನದಿಂದ ಐಲೀನಾ ಹುಡುಗನನ್ನು ಬರಸೆಳೆದು ಅಪ್ಪಿಕೊಂಡಳು. ಅದೆಷ್ಟು ಹೊತ್ತು ಹಾಗೇ ನಿಂತು ಅವನ ತಲೆ ಸವರಿದಳೋ. ಅವಳ ಕಣ್ಣುಗಳಲ್ಲಿ ತುಂಬಿ ಹೊರ ಹರಿಯುತಿದ್ದ ಕಣ್ಣೀರು ಹುಡುಗನ ತಲೆಯ ಮೇಲೆ ಬೀಳುತ್ತಿತ್ತು. ಅವನ ಕಣ್ಣಹನಿ ಅವಳ ಪಾದ ತೊಳೆಯುತಿತ್ತು. "ಕಿಟ್ಟು" ಎಂದು ಅವನನ್ನೆತ್ತಿ ನಲಿದಳು; ಚುಂಬಿಸಿದಳು; ಅಪ್ಪಿಕೊಂಡಳು ಐಲೀನಾ. ತಾನೇನು ಮಾಡುತಿದ್ದೇನೆಂಬ ಪರವೆಯೋ ಇಲ್ಲದೆ ಕುಣಿದಾಡಿದಳು. ಹುಡುಗ ಮಾತ್ರ ಅಮ್ಮಾ . . . . ಅಮ್ಮಾ . . . . . ಎಂದು ಕಣ್ಣೀರು ಸುರಿಸುತ್ತಲಿದ್ದ. ರೂಬಿಗೆ ಇದೆಲ್ಲ ವಿಚಿತ್ರವಾಗಿ ಕಾಣುತಿತ್ತು. ಇವರನ್ನೆ ಎವೆಯಿಕ್ಕದೆ ನೋಡುತ್ತ, ದಂಗುಬಡಿದಂತೆ ಆಕೆ ನಿಂತಿದ್ದಳು. ಮನೆಯ ಕೊಟಡಿಯೊಳಕ್ಕೆ ನಡೆದಳು ಐಲೀನಾ. ಗೋಡೆಗೊರಗಿ

ಕುಳಿತಳು. ಕಿಟ್ಟುವನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡಳು. ಇನ್ನೊಂದು ತೊಡೆಯನ್ನೇರಿ ರೂಬಿ ಕುಳಿತಳು. ತನ್ನ ಸೆರಗಿನಿಂದ ಕಣ್ಣುಗಳನ್ನುಜ್ಜಿಕೊಳ್ಳುತ್ತ ಐಲೀನಾ ಹೇಳಿದಳು.

"ಇದು ನಿನ್ನ ಅಣ್ಣ . . . . . ರೂಬಿ"

"ಇಷ್ಟುದಿನ ಎಲ್ಲಿದ್ದ ಅಮ್ಮ . . . . ?"

"ತಾತನ ಮನೆಯಲ್ಲಿ"

"ತಾತ . . . . . ?"

"ಹೌದು ಮಗು. ತಾತ ಚೆನ್ನಾಗಿದ್ದಾರೆಯೇ ಕಿಟ್ಟು? ನಿನ್ನ ಅಮ್ಮ ನನ್ನೇಕೆ ಮರೆತುಬಿಡಲಿಲ್ಲ. ಈ ಪಾಪಿಯನ್ನೇಕೆ ಹುಡುಕಿ ಬಂದೆ."

"ನೀ ಮರೆತಿಲ್ಲ-ನಾ ಹೇಗೆ ಮರೆಯಲಮ್ಮ ತಾತ ಚೆನ್ನಾಗಿದ್ದಾರೆ. ಅವರ ಆಶೀರ್ವಾದ ಪಡೆದೇ ಬಂದೆ".

"ಯಾವಾಗ ಬಂದೆ? ಮನೆಯ ಗುರುತು . . . . . ?"

"ಮೂರು ದಿನವಾಯಿತು. ಇಲ್ಲೇ ಇದ್ದಿ ಎಂದು ಯಾರೋ ಹೇಳಿದರು ಬೆಂಡೂರನ್ನೆಲ್ಲ ಹುಡುಕಿ ಮನೆ ಕಂಡುಹಿಡಿದೆ. ತಂಗಿಯ ಹೆಸರು . . . . ರೂಬಿ . . . . ಅಲ್ಲವೇನಮ್ಮ. ತುಂಬ ಚೆನ್ನಾಗಿದ್ದಾಳೆ . . ವರ್ಷ . . . . ."

"ಆರು ಮಗು . . . . . ನೀನು ಓದಿದೆಯಾ . . . . ."

"ಹ್ಞಾ . . . . ಐದನೇ ಕ್ಲಾಸಾಯಿತು."

ತಾಯಿಮಕ್ಕಳು ಎಷ್ಟು ಹೊತ್ತು ಮಾತುಕತೆ ನಡೆಸಿದರೊ ಇಬ್ಬರಿಗೂ ಗೊತ್ತಾಗಲಿಲ್ಲ. ಐಲೀನಾ ಮಗನಿಗೆ ಹಾಲು ಕುಡಿಸಿದಳು, ಕಾಫಿ-ತಿಂಡಿ ಕೊಟ್ಟಳು, ಕೇಕ್ ತಿನಿಸಿದಳು. ಅವಳ ಉತ್ಸಾಹ ಪ್ರೇಮ ಎಲ್ಲವನ್ನೂ ಮರೆಸಿತ್ತು. ಅಡುಗೆ ಮಾಡುತ್ತಿದ್ದಂತೆ, ನೀರು ತರುತ್ತಿದ್ದಂತೆ, ಕಸಗುಡಿಸುತ್ತಿದ್ದಂತೆ ಮಾತು ನಡೆದೇ ಇತ್ತು. ಕಿಟ್ಟು ಅಮ್ಮನೊಡನೆ ಮಾತನಾಡುತ್ತಿದ್ದಂತೆ ರೂಬಿಯನ್ನು ತನ್ನೆಡೆಗೆ ಸೆಳೆದುಕೊಂಡ. ಎಲ್ಲಿಲ್ಲದ ಸಲುಗೆಯಿಂದ ಇಬ್ಬರೂ ಆಟವಾಡುತ್ತಿದ್ದರು. ಜತೆಯಾಗಿ ಬೆಳೆದವರಿಗಿಂತ ಹೆಚ್ಚಾದ ಸಲುಗೆ-ಕೆಲನಿಮಿಷಗಳಲ್ಲೇ ಅವರಲ್ಲಿ ಬೆಳೆಯಿತು. ದೇವರಲ್ಲಿ ನಮ್ಮ ಭಕ್ತಿ, ನಲ್ಮೆ ಅಧಿಕವಾದರೆ ಆತ-ಇಂದಲ್ಲ ನಾಳೆಯಾದರೂ ಕಾಣಸಿಗ. ತ್ತಾನೆ ಎನ್ನುತ್ತಾರೆ. ಅದು ಆಧಾರವಿಲ್ಲದ ಸಾಮಾನ್ಯನಿಗೆ ಸಿಲುಕದ

ಮಾತು. ಆದರೆ, ಮನುಷ್ಯ ಮಾತ್ರ ಎಂದಾದರೊಮ್ಮೆ ತನ್ನ ಪ್ರೇಮದ ಪ್ರತೀಕವಾಗಿ ಸಂಧಿಸುತ್ತಾನೆ ಎಂಬುದು ಖಚಿತವಾಯಿತು ಐಲೀನಾಳಿಗೆ. ತನ್ನ ಈ ಬಾಳಿನಲ್ಲಿ ತನ್ನ ಮಗನ ಮುಖ ನೋಡುವ ಭಾಗ್ಯ ಬರುವುದಿಲ್ಲೆಂದುಕೊಂಡಿದ್ದಳು ಆಕೆ. ಆದರೆ, ಆತನೇ ಇಂದು ತನ್ನ ತಾಯಿಯನ್ನು ಹುಡುಕಿ ಬಂದಿದ್ದಾನೆ.

ಅಡುಗೆ ಮಾಡುತ್ತಿದ್ದಂತೆ ಐಲೀನಾ ಮಗನ, ತಾತನ ಎಲ್ಲ ವಿಚಾರ ತಿಳಿದಳು, ತನ್ನ ಕತೆಯನ್ನೂ ಹೇಳಿದಳು. ಹಾಗೇ ನಗುತ್ತಾ ನುಡಿದಳು:–

"ನಾನೀಗ ಕ್ರೈಸ್ತಳು ಕಿಟ್ಟು. ಬಾಗಿಯಲ್ಲ–ಐಲೀನಾ"

"ನನಗೆ ಗೊತ್ತು ಅಮ್ಮ. ಆದರೆ, ನನಗೆ ಮಾತ್ರ ತಾಯಿ "

"ನೀನು ನನ್ನ ಮನೆಯಲ್ಲಿ ಉಣ್ಣಬಾರದು. ನನ್ನ ಕೈಯ ಅಡಿಗೆ ಉಂಡರೆ ಜಾತಿ ಹೋದೀತು."

"ಇರಬಹುದು. ಆದರೆ, ನಾನು ನನ್ನ ಅಮ್ಮ ಬಡಿಸಿದುದನ್ನು ಉಣ್ಣುತ್ತಿದ್ದೇನೆ. ಅಮ್ಮ ಬಡಿಸಿದುದನ್ನು ಉಂಡೆನೆಂದು ನನ್ನ ಜಾತಿ ಹೋದರೆ ಚಿಂತೆಯಿಲ್ಲ. ಅಂಥ ಜಾತಿ ನನ್ನ ಬಳಿ ಯಾಕಿರಬೇಕು?"

ತನ್ನ ಮನೋಭಾವದ ಮೂರ್ತಿಮತ್ತ ಸ್ವರೂಪ ಕಿಟ್ಟು ಎಂಬವಳಿಗೆ ಅರಿವಾಯಿತು. ಎಷ್ಟು ಸ್ವತಂತ್ರ ವಿಚಾರವದು! ಎಂಥ ಜಾಣ್ಮೆ! ಈ ಮಗುವನ್ನು ನನ್ನದೆಂದು ಹೇಳಿ ಮೆರೆವ ಭಾಗ್ಯವಿಲ್ಲವಾಯಿತಲ್ಲ ಎಂಬ ಕೊರಗೂ ಅವಳ ಮನದಲ್ಲಿ ಮೂಡಿತು. ಆದರೂ, ಆತ ದುಡಿಮೆಯನ್ನು ಹುಡುಕಿ ಈ ಊರಿಗೆ ಬಂದಿದ್ದಾನೆ; ಒಂಟಿಯಾಗಿದ್ದಾನೆ ಅಂದಾಗ, ಆಗಾಗ ಅವನನ್ನು ಕಾಣುತ್ತ ನಲಿಯಬಹುದು. ಅವನ ಏಳಿಗೆಯನ್ನು ತಾನು ಬಯಸಬಹುದು. ಉತ್ಕರ್ಷೆಯನ್ನು ಕಂಡು ಹಿಗ್ಗಬಹುದು–ಎಂಬ ತೃಪ್ತಿ ತಾಯಿ ಕರುಳಿನಲ್ಲಿ ಮೂಡಿತು ಕಿಟ್ಟು ಐಲೀನಾಳನ್ನು ಹಳೆಯ ಲೋಕಕ್ಕೆ ಎಳೆಯುತ್ತಿದ್ದ. ರೂಬಿ ಅವಳನ್ನು ಹೊಸ ಲೋಕಕ್ಕೆ ಕರೆಯುತ್ತಿದ್ದಳು. ಈ ಎರಡು ಲೋಕಗಳ ನಡುವೆ ತೂಗಾಡುತ್ತಾ ಅವಳು ದಿನವನ್ನು ನಿವಿಷವಾಗಿ ಕಳೆದಳು.

ಸಂಜೆ ಅಂತೋನಿ ಮನೆಹೊಗುವಾಗಲೇ ಅವನನ್ನು ಸ್ವಾಗತಿಸಿ ತನ್ನ ಮಗ ಬಂದಿದ್ದಾನೆ ಎಂದು ಸಾರಿದಳು ಐಲೀನಾ. "ಏನು? ಮಗು . . ." ಎಂದಿಷ್ಟೆ ವಿಚಾರಿಸಿ ವಿರಮಿಸಿದ. ರೂಬಿ ಅವನ ತೊಡೆಯ ಮೇಲೆ

ಕಲಿತುಕೊಂಡು ಆಟವಾಡುತ್ತಿದ್ದಳು ತನ್ನ ಅಣ್ಣ ಬಂದನೆಂದು ತಿಳಿಸಿದಳು. ಅವನಿಗೆ ನಮ್ಮ ಭಾಷೆ ಬರುವುದೇ ಇಲ್ಲ ಎಂದು ದೂರುಕೊಟ್ಟಳು. ಆದರೂ ಅಂತೋನಿಯ ಮುಖ ಯಾವ ಭಾವವನ್ನೂ ಪ್ರದರ್ಶಿಸಲಿಲ್ಲ. ಇಡೀ ದಿನ ದುಡಿದು ಬಂದ ಜೀವ ಅದು. ಉಂಡು ಮಲಗಿದರೆ ಸಾಕೆಂದು ಕಾದಿತ್ತು. ಉತ್ತರವನ್ನೇನೂ ಕೊಡದೆ ಎಲ್ಲ ವಿಚಾರವನ್ನೂ ಐಲೀನಾಳಿಂದ ಕೇಳಿ ತಿಳಿದುಕೊಳ್ಳುತ್ತಿದ್ದ ಅಂತೋನಿ ಊಟ ಮುಗಿಸಿ ಮಲಗಿಕೊಂಡ. ರೂಬಿ ಮತ್ತು ಕಿಟ್ಟು ಇಬ್ಬರನ್ನೂ ಮಲಗಿಸಿ ಐಲೀನಾ ಅಂತೋನಿಯ ಕೋಣೆಗೆ ನಡೆದಳು.

ಕಿಟ್ಟುವಿಗೆ ಇಡಿಯ ರಾತ್ರಿ ಸರಿಯಾಗಿ ನಿದ್ರೆಯೇ ಬರಲಿಲ್ಲ. ತಾಯಿ ತನ್ನ ಬಗೆಗೆ ತೋರಿದ ಆದರದಿಂದ ಆತ ಹಿಗ್ಗಿದ್ದ. ತನ್ನನ್ನು ಮರೆತಿಲ್ಲ, ತಾತನ ನೆನಪು ಅವಳ ಮನದಿಂದ ದೂರವಾಗಿಲ್ಲ ತಾಯ್ತನದ ಎಲ್ಲಾ ಅಪಾರ ಗುಣಗಳೂ ಅವಳಲ್ಲಿವೆ. ಆದರೆ . . . . . ಅವಳು ಹಿಡಿದ ದಾರಿ ಸರಿಯೇ? ತಾನಾದರೂ ಹೇಗೆ ಅವಳನ್ನು ತಾಯಿ ಎಂದು ಕರೆಯಬಲ್ಲೆ? ತನ್ನ ತಾಯಿ ಹೀಗಾಗಿದ್ದಾಳೆ ಎಂದರೆ ತನಗಾದರೂ ಯಾವ ಮಾನ ಬರುತ್ತೆ? ಇವಳು ನನ್ನ ತಾಯಿ ಅವಳು ತಂಗಿ ಎಂದು ನಾನು ಹೇಗೆ ಹಿಗ್ಗಲಿ? ನಾಯಿಯ ಮೊಲೆಯಲ್ಲಿ ಹಾಲಿದೆ-ಎಂದಂತಾಗಿದೆ ನನ್ನ ಸ್ಥಿತಿ. ತಾಯಿ ಇದ್ದಾಳೆ, ಅವಳು ಪ್ರೀತಿಸುತ್ತಾಳೆ; ಆದರೆ ಈ ಪ್ರೇಮವನ್ನು ಪ್ರತಿಬಿಂಬಿಸುವ ಭಾಗ್ಯ ಈ ಕನ್ನಡಿಗಿಲ್ಲ. ಅವಳು ಆದೇಕೆ, ಪತಿ ಎಂಬವನ ಮುಂದೆ ಬಾಡಿದ ಹೂವಾಗುತ್ತಾಳೆ? ನನ್ನ ತಾಯಿ ಇನ್ನೊಬ್ಬನ ತೋಳಲ್ಲಿ ವಿರಮಿಸುವುದನ್ನು ನಾನು ಹೇಗೆ ನೋಡಲಿ? ಅವಳು ಸೂಳೆಯಾಗಲಿಲ್ಲವೇ? ಹತ್ತು ಮಂದಿಯನ್ನು ಸೇರಿದರೇನೇ ಹೆಣ್ಣು ಸೂಳೆಯಾದಂತಾಯಿತೇ! ಇಬ್ಬರು ನಾಲದೆ ಈ ಹೆಸರು ಪಡೆಯಲು? ಜಾತಿಕೆಟ್ಟ ಸೂಳೆಯ ಮಗನಾದೆ ನಾನು . . . . . . ಕಿಟ್ಟುವಿನ ಮನದಲ್ಲಿ ಬೇಸರವೂ ಜುಗುಪ್ಸೆಯೂ ಮೂಡಿತು. ಛೆ! ಎಂಥ ಬಾಳು ಬಾಳುತ್ತಿದ್ದಾಳೆ ನನ್ನ ತಾಯಿ ಎಂದು ಅತ್ತೂ ಬಿಟ್ಟ.

ಎಷ್ಟು ಹೊತ್ತು ಅತ್ತು ಕಣ್ಣೀರು ಸುರಿಸಿದನೋ, ಎಷ್ಟು ಹೊತ್ತಿಗೆ ನಿದ್ರೆ ಹತ್ತಿತೋ?

---

# ಏಳು

"ಏಳಬಾರದೆ? ಎಷ್ಟು ಹೊತ್ತು ನಿದ್ರೆ. ಮುಖತೊಳೆದು ಕಾಫಿ ಕುಡಿ ಮಗೂ" ಎಂದು ಐಲೀನಾ ಕರೆದಾಗಲೇ ಕಿಟ್ಟುವಿಗೆ ಎಚ್ಚರವಾದುದು. ಆ ಬೆಳಗಿನಲ್ಲೇ ಏನೇನೋ ಕನಸು ಕಾಣುತ್ತಿದ್ದ ತಾಯಿಯ ಆದರದ ಚಿತ್ರ ಅವನ ಮುಂದೆ ಅಚ್ಚಳಿಯದೆ ನಿಂತಿತ್ತು. ಎಲ್ಲೇ ಹೋಗಿರಲಿ, ಏನೇ ಆಗಿರಲಿ–ತಾಯಿ ತನ್ನ ಮಕ್ಕಳನ್ನು ಮರೆಯುವುದು ಸಾಧ್ಯವಿಲ್ಲ.

ಅವನೇನೋ ಆ ಉತ್ತಾನಪಾದರಾಯ ತಾನೆ? ತನ್ನ ಇಬ್ಬರು ಮಕ್ಕಳನ್ನು ತೊಡೆಯ ಮೇಲಿರಿಸಿಕೊಳ್ಳಲು ಯತ್ನಿಸಿದ. ಆನಂದಪಡಲೆಳಸಿದ. ಆಗ ಅವನ ಕಿರಿಯ ಹೆಂಡತಿ ಅಡ್ಡ ಬಂದಳು. ಸವತಿಯ ಮಗನನ್ನು ಹೊರದೂಡಿದಳು. ಹೆಣ್ಣಿನ ಬಂಧನಕ್ಕೆ ಕಟ್ಟುಬಿದ್ದ ರಾಜ ಹೇಡಿಯಂತೆ ಅಸಹಾಯಕನಾಗಿ ಕಣ್ಣು ಮಿಟುಕಿಸುತ್ತ ತೆಪ್ಪಗೆ ಕುಳಿತ. ತಂದೆಯ ಸ್ಥಿತಿಯನ್ನು ಕಂಡು ಹುಡುಗನಿಗೆ ನಾಚುಗೆಯಾಯಿತೋ ಏನೋ? ಆ ಬಾಲಕ ಧ್ರುವ ತಾಯಿಯ ಗುಡಿಸಲಿಗೆ ಮರಳಿದ ಈ ಚಿತ್ರದ ಕನಸು ಕಾಣುತ್ತಿದ್ದ ಕಿಟ್ಟು.

ತಂದೆಗೆ ಮಗನ ಮೇಲೆ ಮಮತೆ ಇರಲಿಲ್ಲವೇ? ಇತ್ತು. ಆತ ತನ್ನ ಬಳಿಗೆ ಬಂದೊಡನೆಯೆ ಎಲ್ಲಿಲ್ಲದ ಉತ್ಸಾಹದಿಂದ ಅವನನ್ನು ಬರಸೆಳೆದು ಅಪ್ಪಿಕೊಳ್ಳಲು ಕೈನೀಡಿದ. ಆದರೆ...... ತನ್ನ ಪತ್ನಿಯೇ ಅವನಿಗೆ ಅಡ್ಡವಾಗಿ ನಿಲ್ಲುತ್ತಾಳೆ. ಗಂಡಸಿಗೆ ತನ್ನ ಪತ್ನಿಯ ಮೇಲೆ ಅಧಿಕಾರವಿಲ್ಲವೇ? ಅದೂ ಬೇಡ; ತನ್ನ ಇನ್ನೊಬ್ಬ ಪತ್ನಿಯಲ್ಲಿ ತನಗೇ ಜನಿಸಿದ ಪುತ್ರನನ್ನು ಬರಸೆಳೆದು ಮೈದಡಹುವ ಅಧಿಕಾರವೂ ಇಲ್ಲವೇನು? ಹೀಗಿದ್ದರೂ ಈ ಷಂಡ ಮಹಾರಾಜ, ದೇಶದ ತಂದೆ, ವೀರಾಧಿವೀರನೆಂದು ದಿನ ಬೆಳಗಾದರೆ ತನ್ನ ಆಸ್ಥಾನದ ಹೊಗಳುಭಟರಿಂದ ಹೊಗಳಿಸಿಕೊಳ್ಳುವ ಗಂಡುಗಲಿ, ತಾನಾಗಿ ಇಲ್ಲವಾದ ಶೌರ್ಯಧೈರ್ಯಗಳು ಹೊಗಳಿಸಿಕೊಂಡರೆ ಎಲ್ಲಿಂದ ಬರುತ್ತವೆ? ಅದಕ್ಕೇ ಇರಬೇಕು; ತನ್ನ ಹೆಂಡತಿಯ ಮುಂದೆ ಗರಿ ಮುರಿದ ಹಕ್ಕಿಯಂತೆ, ಚಳಿಹಿಡಿದ ನಾಯಿಮರಿಯಂತೆ ಆತ ನಿಂತು ಕಣ್ಣು ಮಿಟುಕಿಸಿದ್ದು! ಕಿಟ್ಟುವಿಗೆ ಈ ಸಮಸ್ಯೆಯ ಅರ್ಥವಾಗಲಿಲ್ಲ.

ಹೆಣ್ಣಿನ ಮುಂದೆ ಅರಸನೇ ಹೀಗಾದರೆ ನಾವಮಾನ್ಯನು ಹೇಗಾಗಬಹುದು ಎಂಬ ಸಮಸ್ಯೆ ಅವನಲ್ಲಿ ಮೂಡಿತು. ಅವನ ಇತರ ಸಮಸ್ಯೆಗಳ ಜತೆಗೂಡಿ ಇದೂ ನಿಂತಿತೇ ವಿನಾ ಉತ್ತರವನ್ನೀಯಲಿಲ್ಲ.

ನಾನು ಬಂದೊಡನೆ ಆದರಿಸಿ ನನ್ನನ್ನೂ ತಂಗಿ ರೂಬಿಯನ್ನೂ ನನ್ನ ತಾಯಿ ತೊಡೆಯ ಮೇಲಿರಿಸಿಕೊಂಡು ನಲಿದಳು; ಆಗ ಅಂತೋನಿ ಅಡ್ಡ ಬಂದಿದ್ದರೆ? ಹಿಂದಿನ ಪತಿಯಲ್ಲಿ ನಾನು ಪಡೆದ ಮಗನು ಇವನು; ನಿಮ್ಮಿಂದ ಪಡೆದವಳು ರೂಬಿ ಎಂದು ಧೈರ್ಯದಿಂದ ಅವನನ್ನು ಉತ್ತರಿಸಿ ನಿಲ್ಲುತ್ತಿದ್ದಳೇ? ನನ್ನ ತಾಯಿ ಆ ಉತ್ತಾನಪಾದನಿಗಿಂತಲೂ ಹೆಚ್ಚಿನವಳಾ ಗುತ್ತಿದ್ದಳೇ? ರಾತ್ರಿ ಅಂತೋನಿ ಮನೆಗೆ ಬಂದಾಗ ನನ್ನ ತಾಯಿ–'ಇವನು ನನ್ನ ಮಗ' ಎಂದು ನಲಿಯುತ್ತ ಹೇಳಿದರೂ ಅವನೇಕೆ ಯಾವ ಭಾವನೆ ಯನ್ನೂ ವ್ಯಕ್ತಪಡಿಸಲಿಲ್ಲ? ಆನಂದವನ್ನಾಗಲೀ ಜುಗುಪ್ಸೆಯನ್ನಾಗಲೀ ನಾನವನ ಮುಖದಲ್ಲಿ ಕಾಣಲಿಲ್ಲ. ಅದು ಭಾವನಾಶೂನ್ಯವಾಗಿತ್ತು. ನಾನು ಬಂದುದು ಅವನಿಗೆ ಹಿಡಿಸಲಿಲ್ಲವೇ? ತನ್ನ ಸರ್ವಸ್ವವನ್ನೂ–ಮಾನ ವನ್ನೂ ಜಾತಿ–ಧರ್ಮಗಳನ್ನೂ ಸಹ ಬಿಟ್ಟು, ನನ್ನ ತಾಯಿ ಅವನಿ ಗೊಲಿದು ಅವನ ಹಿಂದೆ ಬಂದಿದ್ದಾಳೆ. ಅವನಿಗೆ ವಿರುದ್ಧವಾಗಿ ವರ್ತಿಸ ಬಲ್ಲಳೇ? ಉತ್ತಾನಪಾದ ರಾಯನಂತೆ ನನ್ನ ತಾಯಿ ಆಗಿದ್ದರೆ . . . . . . . ನಾನೂ . . . . . ಈ ಮನೆಬಿಟ್ಟು ಹೋಗಬೇಕು. ನನಗೂ ಜಗತ್ತಿನಲ್ಲಿ ಯಾರೂ ಗತಿಯಿಲ್ಲ; ದೇವರೇ ತಂದೆ, ತಾಯಿ ಎಂದು ತಿಳಿಯಬೇಕು. ಆ ಕಾಣದ ದೇವರನ್ನು ಹುಡುಕುತ್ತ ಹೋಗಬೇಕು!

ಕಿಟ್ಟುವಿನ ಮುಖದಲ್ಲಿ ನಗುವೊಂದು ಮಿಂಚಿ ಮಾಯವಾಯಿತು. ನನ್ನ ತಾತ ಅದೆಷ್ಟು ಭಕ್ತಿಯಿಂದ ಪೂಜೆ ಮಾಡುತ್ತಿಲ್ಲ. ಎಷ್ಟುಬಾರಿ, 'ದೇವರೇ ಈ ಸಂಕಟದಿಂದ ಪಾರುಮಾಡು' ಎಂದು ನಾ ಬೇಡಿಲ್ಲ. ದೇವರು ಬಂದನೇ? ಈ ಕಲಿಯುಗದಲ್ಲಿ ದೇವರು ಎಲ್ಲಿದ್ದಾನೆ? ಯಾವುದೋ ಕಾಲ ದಲ್ಲಿ ಧ್ರುವ ದೇವರನ್ನು ಹುಡುಕಿ ಹೋಗಿರಬಹುದು; ಅವನನ್ನು ಕಂಡಿರ ಬಹುದು. ಅವನಿಗೆ ಕೂಡಾ ದೊರೆತುದಾದರೂ ಏನು? ತಾಯಿಯನ್ನು ಕಂಡ ಆನಂದದಿಂದ ನನಗೆ ಮಾತೇ ಹೊರಡಲಿಲ್ಲ. ಹಾಗೇ ಆಯಿತು ಆ ಧ್ರುವನಿಗೆ. ತನಗೆ ಬೇಕಾದುದನ್ನು ಕೇಳಲೂ ಮರೆತು ಬಿಟ್ಟ ದೇವರು ಕೂಡಾ 'ದುಃಖಿಸಬೇಡ' ಎಂಬ ಒಣ ವೇದಾಂತ ಹೇಳಿ ಹೊರಟುಹೋದ.

ನಾನೂ ಧ್ರುವನಾಗಲು ಸಾಧ್ಯವೇ? . . . . . ಯಾಕಾಗಬಾರದು? . . . . . . ತಂದೆಯ ತಪ್ಪಿಗೆ ರೋಸಿ, ತಾಯಿಯ ನೀತಿಯಿಂದ ಬೇಸರಗೊಂಡು ಆತ ದೇವರನ್ನು ಕಂಡ. ನಾನೂ ತಾಯಿಯ ನೀತಿ, ತಂದೆಯ ರೀತಿಗಳಿಗೆ ಬಲಿಯಾಗಿ ಬೀದಿ ಸೇರಿ ಬದುಕಲಾರೆನೇ? ಬದುಕುತ್ತೇನೆ. ಒಬ್ಬನೇ ಈ ಸಮಾಜದೊಡನೆ ಹೋರಾಡುತ್ತೇನೆ . . . . . ನನಗೆ ತಾಯಿಯಿಲ್ಲ . . . . . ತಂದೆಯಿಲ್ಲ . . . . . ಮನೆಯಿಲ್ಲ . . . ಈ ವಿಶಾಲ ದೇಶ ನನ್ನದು . . . . ಎಲ್ಲ ಜನರೂ ನನ್ನ ತಂದೆ . . . . . ತಾಯಿ . . . . . ಬಂಧು . . . . ಬಳಗ!

ಐಲೀನಾಳ ಕರೆ ಕೇಳಿ ಕಿಟ್ಟು ಥಕ್ಕನೆ ಎದ್ದ.

"ಯಾಕೆ ಮಗು . . . . ಗಾಬರಿಗೊಂಡಂತಿದೆ?"

"ಏನೋ ಕನಸು ಕಾಣುತ್ತಿದ್ದೆ ಅಮ್ಮ."

"ಬಹಳ ಬಳಲಿದರೆ ಹಾಗೇ ಆಗುತ್ತೆ ಏಳು . . . . . ಕಾಫಿ ಕುಡಿ."

ಮುಖತೊಳೆದು ಕಿಟ್ಟು ಅಡುಗೆ ಮನೆಗೆ ಬಂದ. ಮಗನನ್ನು ಬಳಿಯಲ್ಲೆ ಕುಳ್ಳಿರಿಸಿಕೊಂಡು ಐಲೀನಾ ಕಾಫಿ-ತಿಂಡಿ ನೀಡಿದಳು. ಪಕ್ಕದಲ್ಲೇ ರೂಬಿ ತಿಂಡಿ ತಿನ್ನುತ್ತಿದ್ದಳು.

"ಸಂಜೆ ಪೇಟೆಗೆ ಹೋಗೋಣ ಮಗು. ನಿನಗೆ ಅಂಗಿ, ಇಜಾರ ಮಾಡಿಸಿಕೊಡುತ್ತೇನೆ."

"ಆಗಲಮ್ಮ ನಾನೂ ತಾತನಿಗೊಂದು ಕಾಗದ ಬರೆಯಬೇಕಾಗಿದೆ. ನೀನು ಚೆನ್ನಾಗಿದ್ದೀ ಎಂದು ತಿಳಿಸಬೇಕು."

"ನನ್ನ ವಿಳಾಸ ಮಾತ್ರ ಕೊಡಬೇಡ ಮಗು. ಅವರಿಗೆ ಈ ಹಾಳು ಮುಖ ತೋರಿಸುವ ಧೈರ್ಯವಿಲ್ಲ ನನಗೆ. ಅವರ ಆಶೀರ್ವಾದವಿದ್ದರೆ ಸಾಕು. ಅವರು ಶಾಪವಿತ್ತಂದಿಗೆ ನಾನು ಬಾಳಲಾರೆ."

ಐಲೀನಾಳ ಕಣ್ಣುಗಳಲ್ಲಿ ನೀರು ತುಂಬಿತು. ಸೆರಗಿನಿಂದ ಕಣ್ಣುಗಳನ್ನೊರಸಿಕೊಂಡಳು ಹಳೆಯ ನೆನಪು ಅವಳ ದುಃಖವನ್ನುಕ್ಕಿಸುತ್ತಿತ್ತು.

"ಇಲ್ಲಮ್ಮ . . . . . ವಿಳಾಸ ಕೊಡುವುದಿಲ್ಲ. ನಿನ್ನನ್ನು ನೋಡಿದೊಡನೆ ಎಲ್ಲ ವಿಚಾರ ಬರೆ ಎಂದಿದ್ದರು ತಾತ."

"ನೀನೇನು ಮಾಡುತ್ತೀಯೆ? ಇಲ್ಲೇ ಇದ್ದು ಸ್ಕೂಲಿಗೆ ಸೇರುತ್ತೀಯೇನು?"

"ಸ್ಕೂಲಿಗೆ ಸೇರಬೇಕು . . . . ಆದರೆ . . . . ಇಲ್ಲೇ ನಾನು ಹೇಗಿರ

ಲಮ್ಮ. ನಿಮಗೆ ಹೊರೆಯಾಗಿಲ್ಲೇ? ಅದರಲ್ಲೂ. . . . ತಾತ. . . . . ."

"ನಿಜ ಮಗೂ, ನಾನು ಜಾತಿ ಕೆಟ್ಟೆ; ಅದು ನನ್ನ ಸುಖಕ್ಕಾಗಿ. ನೀನು ಜಾತಿಯನ್ನು ಬಿಡುವುದು ಧರ್ಮವಲ್ಲ. ಆದರೆ. . . ತಾಯಿಗೆ ಮಗನೆಂದೂ ಹೊರೆಯಾಗಲಾರ."

"ತಾತನಿಗೆ ನಾನಲ್ಲದೆ ಬೇರೆಯಾರೂ ದಿಕ್ಕಿಲ್ಲವಮ್ಮ. ಅವರನ್ನು ನಾನು ಕೈಬಿಡಲಾರೆ. ಎಲ್ಲಾದರೂ ಕೆಲಸ ನೋಡಿಕೊಂಡು ಅವರನ್ನೂ ಕರೆಸಿಕೊಳ್ಳುತ್ತೇನೆ. ಅವರಿಗೆ ನಾನೇ ಊರುಗೋಲು"

ಐಲೀನಾ ತುಂಬಾ ವಿಚಾರ ಮಾಡಿದಳು. ಮಗನನ್ನು ತಾನು ಕಿತ್ತು ಕೊಂಡರೆ ತಂದೆ ನಿರ್ಗತಿಕರಾಗುತ್ತಾರೆ. ತಾನೇನೋ ಧರ್ಮವನ್ನು ಬಿಟ್ಟಾಯಿತು; ಈಗ ಈ ಮಗುವನ್ನೂ ಸೆಳೆದು ಏನು ಲಾಭ? ಜಾತಿಕೆಟ್ಟು ಆತ ಯಾವ ಸುಖ ಅನುಭವಿಸಬಲ್ಲ? ಎಲ್ಲೇ ಇರಲಿ, ತನ್ನಿಂದಾದ ಸಹಾಯ ನೀಡಿದರಾಯಿತು. ಅವನನ್ನು ನೋಡಿಕೊಂಡು, ಅವನ ಪ್ರಗತಿಯ ವಿಚಾರ ತಿಳಿದು ತಾನು ನಲಿಯಬಹುದು ಎಂದು ನಿರ್ಧರಿಸಿದಳು.

"ಆಗಲಿ ಮಗೂ, ಎಲ್ಲಾದರೂ ಕೆಲಸ ನೋಡು. ಮುಂದೆ ಈ ಊರಲ್ಲೇ ಚಿಕ್ಕದೊಂದು ಬಿಡಾರ ಮಾಡಿ ತಾತನನ್ನು ಕರೆಸಿಕೊಳ್ಳು. ಅವನು ಹೆರವರ ಕೂಳಿಗೆ ಕೈನೀಡಬೇಕಾಗಿದೆ ಈಗ"

"ಹಾಗೇ ಮಾಡುತ್ತೇನಮ್ಮ. . ."

"ಅದುವರೆಗೆ ಇಲ್ಲೇ ಇರು. ನನ್ನಿಂದಾದ ಎಲ್ಲ ಸಹಾಯ ಮಾಡು ತ್ತೇನೆ. ತಿಂಗಳು ತಿಂಗಳು ನಾಲ್ಕೋ ಆರೋ ರೂಪಾಯಿ ತೆಗೆದುಕೊಳ್ಳು. ಸ್ಕೂಲಿಗೆ ಸೇರಿಕೊಳ್ಳುವುದು ಸಾಧ್ಯವಾದರೆ ನೋಡು . . . ಇಲ್ಲ . . ಅಂಗಡಿ ಇಡುತ್ತೀಯಾ? ನಾನು ಸಹಾಯ ಮಾಡುತ್ತೇನೆ."

"ಮೊದಲು ಎಲ್ಲಾದರೂ ಕೆಲಸ ನೋಡಿಕೊಳ್ಳುತ್ತೇನಮ್ಮ. ಈ ಊರೂ ನನಗೆ ಹೊಸದು. ಅನುಭವವಾದ ಮೇಲೆ ಅಂಗಡಿ ಅಥವಾ ಶಾಲೆಯ ಯೋಚನೆ."

ಸಂಜೆ ಕಿಟ್ಟು ತಾಯಿಯ ಜತೆಗೆ ಪೇಟೆಗೆ ಹೋದ. ಐಲೀನಾ ಅವನಿಗೆ ಬೇಕಾದ ಅಂಗಿ, ಇಜಾರ ಹೊಲಿಯಲು ಹಾಕಿದಳು. ತನ್ನ ಮಗನ ಉತ್ಕರ್ಷೆಗೆ ಏನು ಮಾಡಲಿ, ಹೇಗೆ ಸಹಾಯ ನೀಡಲಿ ಎಂಬುದೇ ಅವಳ ಯೋಚನೆಯಾಗಿತ್ತು. ತನ್ನ ಮಗ ಸುಖವಾಗಿದ್ದರೆ ತನ್ನ ತಂದೆ ಸುಖಿಯಾಗುತ್ತಾನೆ ಎಂದವಳ ಚಿಂತೆ.

ಅಂತೋನಿ ಆ ದಿನ ಕತ್ತಲಾಗುವ ವೇಳೆಗೇ ಮನೆಗೆ ಬಂದಿದ್ದ. ಕಿಟ್ಟುವನ್ನೂ ಕರೆದು ಹತ್ತಿರ ಕುಳ್ಳಿರಿಸಿಕೊಂಡು ಮಾತನಾಡಿದ. ಎಲ್ಲ ಕ್ಷೇಮಸಮಾಚಾರಗಳ ಬಗೆಗೆ ವಿಚಾರಿಸಿದ. ತನ್ನ ತಾಯಿಯನ್ನಾತ ಇನ್ನೆತ್ತ ಸೆಳೆಯುತ್ತಾನೋ ಎಂಬ ಭೀತಿ ಇತ್ತು ಕಿಟ್ಟುವಿಗೆ. ತನ್ನನ್ನು ಕಂಡು ಆತ ಬೇರೊಂದು ಊರಿಗೆ ತನ್ನ ಸಂಸಾರ ಸಾಗಿಸಿದರೆ? ಅವನೇ ಮನಸ್ಸು ಬದಲಾಯಿಸಿದರೆ? ನಿನ್ನೆ ಬಂದುದು ನಾಳೆ ಏಕೆ ಹೋಗಬಾರದು?

ಕಿಟ್ಟು ತಾನು ಬೇರೆ ಕೆಲಸ ನೋಡುತ್ತೇನೆ ಎಂದಾಗ ಅವನಿಗೆ ಹರ್ಷವಾಯಿತು. ಯಾವುದೋ ಋಣ ತೀರಿಸೋಣ. ಅವಳೊಂದಿಗೆ ಇವನೂ ಬಂದಿದ್ದರೆ ತಾನು ಸಲಹಬೇಕಾಗಿರಲಿಲ್ಲವೇನು? ಈಗ ಸಹಾಯ ನೀಡಿದರಾಯಿತು-ಎಂದು ಅಂತೋನಿ ತೃಪ್ತನಾದ. ತನ್ನ ಅಭಿಪ್ರಾಯವನ್ನು ತಾನೇ ಐಲೀನಾಗೂ ತಿಳಿಸಿದ. ಅವಳಿಗೂ ಆನಂದವಾಯಿತು.

ಮರುದಿನ ಮುಂಜಾನೆ ಕಿಟ್ಟು ಪೇಟೆಗೆ ಹೊರಟಾಗ ಐಲೀನಾ ಅವನ ಕೈಗೊಂದು ರೂಪಾಯಿ ಕೊಟ್ಟಳು. ಹೋಟೆಲಿಗೆ ಹೋಗಿ ಬೇಕಾದ ತಿಂಡಿ ತಿನ್ನು, ಸಂಜೆ ಬೇಗನೇ ಬಂದುಬಿಡು ಎಂದಳು.

ಊರೆಲ್ಲ ಸುತ್ತಿ ಹತ್ತಾರು ಹೋಟೆಲುಗಳನ್ನು ನುಗ್ಗಿ ಕಿಟ್ಟು ಒಂದೆಡೆ ಕೆಲಸ ಗೊತ್ತುಮಾಡಿಕೊಂಡ. ಮೊದಲ ತಿಂಗಳು ಮೂರು ರೂಪಾಯಿ ಸಂಬಳ. ಕೆಲಸ ಚೆನ್ನಾಗಿ ಮಾಡಿದರೆ ಮುಂದಿನ ತಿಂಗಳಿನಿಂದ ಹೆಚ್ಚಿಗೆ ಕೊಡುವ ಭರವಸೆಯನ್ನು ಹೋಟೆಲ್ ಮಾಲಿಕ ಕೊಟ್ಟಿದ್ದ. ನಾಳೆಯಿಂದ ಬರುತ್ತೇನೆ ಎಂದು ಕಿಟ್ಟು ಹಿಂತಿರುಗಿದ.

ಮಗುವಿಗೆ ಉದ್ಯೋಗ ದೊರೆತ ವಿಷಯ ತಾಯಿಗೆ ಹರ್ಷವನ್ನುಂಟು ಮಾಡಿತು. ಹೋಟೆಲಿನ ಕೆಲಸವೆಂದರೆ ಏನೆಂಬುದು ಅವಳಿಗೆ ಹೇಗೆ ತಿಳಿಯಬೇಕು? 'ಆಗಲಿ, ರಾತ್ರಿಗೆ ಮನೆಗೆ ಬಂದುಬಿಡು' ಎಂದು ದನಿಗೂಡಿಸಿದಳು.

ಮೊಮ್ಮಗನ ಪತ್ರವನ್ನು ಕಂಡು ರಾಮಯ್ಯನಿಗೆ ಸಂತೋಷವಾಯಿತು. ತನ್ನ ಬಾಗಿ ತನ್ನನ್ನು ಮರೆತಿಲ್ಲ. ಜಾತಿ ಕೆಟ್ಟರೂ ಕುಲಕ್ಕೆ ಹೊರಗಾದರೂ ಸುಖವಾಗಿದ್ದಾಳೆ ಎಂದವರಿಗೆ ತೃಪ್ತಿಯಾಯಿತು. ಸಮಾಜದ ಚಿತ್ರಹಿಂಸೆಯಿಂದಾಗಿ ಆಕೆ ತನ್ನಿಂದ ದೂರವಾದಳು. ಅವಳಿಗೆ ಜನ್ಮವಿತ್ತ ಸಮಾಜ ಅವಳನ್ನು ಉಳಿಸಿಕೊಳ್ಳಲಾರದಾಯಿತು ಎಂದು ಸಮಾಜದ ಮೇಲೂ ಸಿಟ್ಟುಗೊಂಡರು. ಮಗುವಿನ ಬಗೆಗೆ ಅವಳು ತೋರಿದ್ದ ಆದರ

ವಂತೂ ಅವರನ್ನು ಮತ್ತಷ್ಟು ಅವಳ ಹತ್ತಿರಕ್ಕೇ ಸೆಳೆದಿತ್ತು. ಜಾತಿಯು ಕಾಟವಿಲ್ಲವಾದಲ್ಲಿ ಅವಳೆಂದೂ ತನ್ನನ್ನು ಬಿಟ್ಟು ದೂರ ಹೋಗುತ್ತಿರಲಿಲ್ಲ. ಮಗುವನ್ನು ಮರೆಯುತ್ತಿರಲಿಲ್ಲ. 'ಕೊನೆಯ ಗಳಿಗೆಯಲ್ಲಿ ನಿಮ್ಮನ್ನಾದರೂ ನೋಡಿಕೊಳ್ಳುವವರಿಲ್ಲವಾಯಿತೆಂದು ದುಃಖಿಸಿದಳು. ನೀನೆಂದೂ ತಾತನ ಕೈಬಿಡಬೇಡ ಎಂದಳು' ಎಂದು ಕಿಟ್ಟು ಬರೆದಿದ್ದ ರಾಮಯ್ಯ ಬಾಗಿಯ ಎಲ್ಲ ತಪ್ಪುಗಳನ್ನೂ ಮರೆಯಲು ಇದು ಕಾರಣವಾಯಿತು

ಹೋಟೆಲು ಕೆಲಸವೆಂದು ಕೊರಗಬೇಡ. ಅದನ್ನೇ ನಿನ್ನ ಗುರಿಯಾಗಿಟ್ಟುಕೊಂಡರೂ ಚಿಂತೆಯಿಲ್ಲ. ನಿನ್ನ ಪಾಲಿಗೆ ಸಾವಿರ ರೂಪಾಯಿ ಬಂದಿದೆ. ನಾನು ಮಿಗಿಸಿದ ಐದು ನೂರೂ ಇದೆ. ಯಾವಾಗ ಬೇಕಾದರೂ ನಾಗಪ್ಪಯ್ಯ ಅದನ್ನು ಕೊಡುತ್ತಾನೆ. ಮುಂದೆ ನೀನೇ ಒಂದು ಪುಟ್ಟ ಹೋಟೆಲು ಮಾಡಿಕೊಂಡು ಸುಖವಾಗಿರಬಹುದು. ಹೋಟೆಲಿನ ಕೆಲಸಗಳನ್ನೆಲ್ಲ ಕಲಿತುಕೋ ಎಂದು ತಾತ ಉತ್ತರ ಬರೆದರು.

ನಾಲ್ಕಾರು ತಿಂಗಳ ಕಾಲ ಹೋಟೆಲಿನಲ್ಲಿ ದುಡಿದೇ ಕಿಟ್ಟು ಸೊರಗಿ ಹೋದ. ದಿನಕ್ಕೆ ಇಪ್ಪತ್ತು ತಾಸು ದುಡಿದರೂ ಕಡವೆಯೇ. ಎಲ್ಲ ಕೆಲಸ ಮುಗಿವ ವೇಳೆಗೆ ರಾತ್ರಿ ಹತ್ತು ಗಂಟೆಯಾಗುತ್ತಿತ್ತು. ಹಾಗೇ ಮಲಗಿದನೆಂದರೆ ಬೆಳಗ್ಗೆ ನಾಲ್ಕು ಗಂಟೆಗೆ ಎದ್ದು ಒಲೆ ಉರಿಸಬೇಕು. ತಿಂಡಿ-ಕಾಫಿಯ ಸಿದ್ಧತೆಗೆ ಅಣಿ ಮಾಡಬೇಕು. ಅಲ್ಲಿಂದ ಮುಂದೆ ರಾತ್ರಿಯ ವರೆಗೆ ಕುಳಿತು ತೂಕಡಿಸಲೂ ಅವಕಾಶವಿಲ್ಲ.

ಮೊದಮೊದಲು ಅವನು ದಿನದ ಕೆಲಸ ಮುಗಿಸಿ ರಾತ್ರಿ ಎಷ್ಟು ಹೊತ್ತಾದರೂ ತಾಯಿಯನ್ನು ನೋಡಲು ಹೋಗುತ್ತಿದ್ದ. ಆದರೆ, ಹೋಟೆಲಿನಿಂದ ಐಲೀನಾಳ ಮನೆಗೆ ಏನಿಲ್ಲೆಂದರೂ 2 ಮೈಲಿ ದೂರವಿದೆ. ವಿಶ್ರಾಂತಿಗಾಗಿ ಅವನಿಗೆ ದೊರೆಯುವ ಸಮಯವೇ ಅತ್ಯಲ್ಪ. ಅದರಲ್ಲೂ ನಾಲ್ಕು ಮೈಲಿ ಅತ್ತಿತ್ತ ನಡೆಯುವುದೆಂದರೆ! ಮುಂಜಾನೆ ಅಷ್ಟು ದೂರದಿಂದ ಹೋಟೆಲಿಗೆ ಬರುವಾಗ ಪ್ರತಿದಿನವೂ ಹೊತ್ತಾಗುತ್ತಿತ್ತು. ಅವನ ದನಿಯ ಕೈ ಅವನ ಗಲ್ಲದ ಮೇಲೆ ಕುಣಿಯುವುದರ ಜತೆಗೆ ಕೆಟ್ಟಮಾತುಗಳನ್ನು ಅವನು ಕೇಳಬೇಕಾಗಿತ್ತು. ಹೀಗಾದರೆ ನಾಳೆಯಿಂದ ಕೆಲಸಕ್ಕೆ ಬರಬೇಕಾಗಿಲ್ಲ ಎಂಬ ಎಚ್ಚರಿಕೆಯೂ ಕಿಟ್ಟುವಿಗೆ ದೊರೆಯಿತು.

ಕೆಲಸ ಹೋದರೆ ತನ್ನ ಕನಸೆಲ್ಲ ಕಳೆದುಹೋಗುವುದು ಎಂದು

ಕಿಟ್ಟ ಭೀತನಾದ. ತಾಯಿಯನ್ನೂ ಮರೆತು ಬಿಡಲು ನಿರ್ಧರಿಸಿದ. ಅಂದಿನಿಂದ ಹೋಟೆಲೇ ಅವನಿಗೆ ಮನೆಯಾಯಿತು. ತಿಂಗಳಿಗೊಂದೆರಡು ಬಾರಿ ಅಥವಾ ಹಬ್ಬಗಳ ದಿನ ರಜಾ ದೊರೆತರೆ ಎಲ್ಲಿಲ್ಲದ ಉತ್ಸಾಹದಿಂದ ತಾಯಿಯನ್ನು ಕಾಣಲು ಓಡುತ್ತಿದ್ದ.

ಜೀವನದ ಹೋರಾಟದ ಅರ್ಥ ಈ ಎಳೆಯ ಬಾಲಕನಿಗೂ ಈಗ ಪೂರ್ಣವಾಗುತ್ತ ಬಂತು. ಜೀತದ ಜೀವದ ಸಂಕಟದ ಅರಿವಾಯಿತು. ಯಂತ್ರದಂತೆ ತನ್ನ ದೇಹ ದಂಡಿಸಿ, ಮಾಲಿಕನ ಹಿಂಸೆಗಳನ್ನೆಲ್ಲವನ್ನು ಸಹಿಸಿ ದುಡಿಯತೊಡಗಿದ. ತಾನು ತನ್ನ ಕೆಲಸದಿಂದ ಮಾಲಿಕನ ಮನಸೆಳೆಯ ಬೇಕು; ಅವನ ಮನಕರಗುವಂತೆ ಕೆಲಸಮಾಡಬೇಕು. ಅವನ ಎಲ್ಲ ಹಿಂಸೆಗಳನ್ನೂ ಮೂಕನಾಗಿ ಸಹಿಸಿಕೊಂಡು ತನ್ನ ಬಗೆಗೆ ಅವನಲ್ಲಿ ಪ್ರೇಮ ಹುಟ್ಟಿಸಬೇಕು; ಅವನ ಹೃದಯವನ್ನು ತನ್ನ ದೇಹ ಮನ ದಂಡಿಸುವುದ ರಿಂದ ಪರಿವರ್ತಿಸಬೇಕು ಎಂದು ನಿರ್ಧರಿಸಿದ. ಈ ನಿರ್ಧಾರದಿಂದ ಕಿಟ್ಟ ವಿನ ಸಂಬಳ ಏರಿತು; ದೇಹದ ಶಕ್ತಿ ಇಳಿಯುತ್ತ ಬಂತು. ದಿನಕಳೆದಂತೆ ಅವನ ಜ್ಞಾನ ಬರಡಾಯಿತು, ವಿಚಾರಧಾರೆ ಮೊಟಕಾಯಿತು; ಉತ್ಸಾಹ ಹಿಂಗಿ ಅವನು ಹೇಸರಕತ್ತೆಯಾಗತೊಡಗಿದ. ಅಸ್ಥಿಪಂಜರವಾದ. ಆದರೂ ಮಾಲಿಕನ ಮನಸ್ಸು ಬದಲಾಗಲಿಲ್ಲ.

ಆರು ತಿಂಗಳಾಯಿತು; ವರುಷವೂ ಸಂದಿತು.

ತನ್ನ ಮಗನನ್ನು ಕಂಡು ತಾಯಿಯೇ ಗುರುತು ಹಿಡಿಯದಾದಳು. ಅವನನ್ನು ನೋಡುತ್ತಿದ್ದಂತೆ ಅವಳ ಕಣ್ಣುಗಳಲ್ಲಿ ನೀರು ತುಂಬಿತು. ತನ್ನನ್ನು ಹುಡುಕಿ ಬಂದ ಈತ ತನ್ನ ಕಣ್ಣೆದಿರೇ ಕರಗಿ ಹೋಗುತ್ತಿರು ವುದನ್ನು ಕಂಡು ಅವಳ ಕರುಳು ಕರಗಿ ನೀರಾಯಿತು. ಅವನ ಆರೋಗ್ಯದ ಬಗೆಗೆ ತಿಳಿದಷ್ಟೂ ಅದನ್ನು ಉತ್ತಮ ಪಡಿಸಲು ಸಲಹೆ ಕೊಟ್ಟಷ್ಟೂ ಅವಳಿಗೆ ತೃಪ್ತಿಯಿಲ್ಲ. ಕೊನೆಗೆ, ಈ ಕೆಲಸ ಬಿಟ್ಟುಬಿಡು. ಹೋಟೆಲ್ ಕೆಲಸ, ಊಟ, ತಿಂಡಿ ಸಾಕು. ಹೀಗಾದರೆ ನೀನು ಉಳಿಯಲಾರೆ ಎಂದು ಅತ್ತುಬಿಟ್ಟಳು.

"ಮತ್ತೇನು ಮಾಡು ಅಂತೀಯಾ?"

"ಎಲ್ಲಾದರೂ ಒಂದು ಪುಟ್ಟ ಅಂಗಡಿ ಮಾಡಿಕೊಂಡಿರು. ಬಂದುದು ಸಾಕು ನಿನ್ನ ಪಾಲಿಗೆ."

"ಅದಕ್ಕೂ ಹಣ ಬೇಕಲ್ಲಮ್ಮ."

"ನಾನು ಕೊಡುತ್ತೇನೆ ಮಗೂ. ಪಾಲಿಗೆ ಬಂದುದು ಪಂಚಾಮೃತವೆಂದು ಅನ್ನವೋ ಗಂಜಿಯೋ ತಿಂದು ಬದುಕು. ನಿನ್ನ ಅದೃಷ್ಟ ಚೆನ್ನಾಗಿದ್ದರೆ ಅದೇ ಉದ್ಧರಿಸಬಲ್ಲುದು."

"ಆಗಲಮ್ಮ.... ನಿನ್ನ ಆಶೀರ್ವಾದ. ಯೋಚಿಸುತ್ತೇನೆ."

ಕಿಟ್ಟು ಉತ್ಸಾಹದಿಂದ ನಲಿದ. ತನ್ನ ಜೀವನಕ್ಕೆ ಹೊಸ ಬೆಳಕನ್ನು ನೀಡಲು ತಾಯಿ ಮುಂದೆ ಬಂದಿದ್ದಾಳೆ ತನಗಾಗಿ ಅವಳ ಕರುಳು ಕುದಿಯುತ್ತಿದೆ, ಕರಗುತ್ತಿದೆ. ಇಂದು ಚಿಕ್ಕದೊಂದು ಅಂಗಡಿ ಮಾಡಿಕೊಂಡು ಹಣ ಕೂಡಿಸಿದರೆ ನಾಳೆ ತನ್ನ ಹಣದಿಂದಲೇ ಅದನ್ನು ಬೆಳೆಸಬಹುದು. ಎಂದು ಏನೇನೋ ಕನಸು ಕಾಣುತ್ತ ಹೋಟೆಲಿಗೆ ಹೊರಟ

ದಿನನಿತ್ಯ ಅವನಿರುವ ಹೋಟೆಲಿಗೆ ಕಾಫಿ ಕುಡಿಯಲು ಬರುತ್ತಿದ್ದ ಕಣ್ಣನ್ ದಾರಿಯಲ್ಲಿ ಭೇಟಿಯಾದ ಅವನ ತಲೆಯಲ್ಲಿ ವ್ಯಾಪಾರದ ವಿಚಾರವೇ ಸುಳಿಯುತ್ತಿತ್ತು. ಕಣ್ಣನ್ ನಾಯರ್‌ನೊಡನೆ ಈ ಬಗೆಗೆ ಮಾತನಾಡುವ ಮನಸ್ಸಾಯಿತು ಅವನಿಗೆ ನಾಯರ್, ತೂಗಾಡುವ ಅಂಗಡಿಯಿಂದಲೇ ಜೀವನ ಸಾಗಿಸುತ್ತಿದ್ದಾನೆ. ಇಡೀ ದಿನ ತನ್ನ ಹತ್ತಿಗೆ ತೂಗಾಡುತ್ತಿದ್ದು ತಾನು ಹೇಳಿದಲ್ಲಿಗೆಲ್ಲ ಬರುವ ಅಂಗಡಿ ಅವನ ಜೀವನಾಧಾರ. ಬಂದಂದಿನಿದ ಗಂಜಿ ಕುಡಿದು ಯಾರಿಗೂ ಬಾಗದೆ ಯಾರನ್ನೂ ಬೇಡದೆ ಸ್ವತಂತ್ರ ಜೀವನ ನಡೆಸುತ್ತಿದ್ದಾನೆ. ಕೇರಳದ ಯಾವುದೋ ದೂರದ ಊರಿನಿಂದ ಬಂದು ಅನ್ನವಿಲ್ಲದೆ ನರಳಿ ಕೊನೆಗೆ ಈ ವ್ಯಾಪಾರಕ್ಕೆ ತೊಡಗಿದ. ಅದನ್ನಾರಂಭಿಸಿದ ಒಂದು ವರ್ಷದಲ್ಲೇ ತನ್ನ ತಾಯಿ, ತಂಗಿಯರನ್ನೂ ಕರೆಸಿಕೊಂಡಿದ್ದ. ಬೊಕ್ಕಪಟ್ಟಣದಲ್ಲೊಂದು ಚಿಕ್ಕ ಮನೆಮಾಡಿಕೊಂಡು ಸುಖವಾಗಿದ್ದಾನೆ ಈಗ.

ಕಣ್ಣನ್ ತನ್ನ ದುರಂತ ಜೀವನದ ಕಥೆ ಹೇಳಿ, ತಾನು ಇಂದಿನ ಸ್ಥಿತಿಗೇರಿದ ಬಗೆ ವಿವರಿಸಿದ.

"ನಿನ್ನ ಬಂಧುಗಳಾರೂ ನಿನಗೆ ಸಹಾಯ ಮಾಡಲಿಲ್ಲವೇ?"

"ಯಾರೂ ಬಿಡಿಕಾಸನ್ನೂ ಕೊಡಲಿಲ್ಲ ಹೋಟೇಲಿನಲ್ಲಿ ಲೋಟ ತೊಳೆದು ಹತ್ತು ರುಪಾಯಿ ಕೂಡಿಸಿದೆ ಅದರಿಂದಲೇ ಈ ಅಂಗಡಿ ಆರಂಭಿಸಿದೆ."

"ಈಗ ಎಷ್ಟು ವ್ಯಾಪಾರವಾಗುತ್ತೆ."

"ದಿನಕ್ಕೆ ಹತ್ತು ರೂಪಾಯಿ ದುಡಿಯುವುದೂ ಇದೆ. ಅಂದರೆ ಒಂದು ರೂಪಾಯಿಗೆ ಕಡಿಮೆಯಿಲ್ಲದೆ ಲಾಭ ಬರುತ್ತೆ."

"ಪರವಾಯಿಲ್ಲ ಹಾಗಾದರೆ . . . ."

"ನಿಜ; ಮೊದಲು ದಿನಕ್ಕೆ ಎರಡಾಣೆ-ನಾಲ್ಕಾಣೆ ಲಾಭ ಬರುವುದೇ ಕಷ್ಟವಾಗಿತ್ತು. ಆದರೆ, ಇದ್ದವನೂ ನಾನೊಬ್ಬ. ಒಂದಾಣೆಯ ಅಕ್ಕಿ ತೆಗೆದುಕೊಂಡು ಹೋಗಿ ಸುಖವಾಗಿ ಉಂಡು ತೇಗುತ್ತಿದ್ದೆ. ದಿನಕ್ಕೆ ನಾಲ್ಕಾಣೆ ಬಂದರೆ ನಮ್ಮಂತಹ ಇಬ್ಬರು ಬಡವರು ಬದುಕಬಹುದು ಈ ಕಾಲದಲ್ಲಿ. ಮುಂದೆ ಈ 'ಬೊಂಬಾಯಿ ಬೀಡ' ಕಟ್ಟುವುದನ್ನು ಕಲಿತೆ. ಈಗ ಅದರ ವ್ಯಾಪಾರವೇ ಹೆಚ್ಚು. ಲಾಭವೂ ಚೆನ್ನಾಗಿದೆ."

"ಇಡೀ ದಿನ ದುಡಿಯುತ್ತೀಯೇನೂ?"

"ಈ ಉರಿಬಿಸಿಲಿಗೆ ಹೇಗೆ ಸಾಧ್ಯ ಸ್ವಾಮಿ. ಬೆಳಗ್ಗೆ ಹೊರಟರೆ ಹನ್ನೆರಡು ಗಂಟೆವರೆಗೆ ವ್ಯಾಪಾರ. ಅದೂ ಅಷ್ಟಕ್ಕಷ್ಟೆ. ಸಂಜೆ ನಾಲ್ಕು ಗಂಟೆಯಿಂದ ಏಳು ಗಂಟೆಯ ವರೆಗಿನ ವ್ಯಾಪಾರವೇ ಚೆನ್ನಾಗಿರುತ್ತೆ."

ಕಣ್ಣನ್, ಕಿಟ್ಟು ಮಾತನಾಡುತ್ತ ಹೋಟೆಲ್ ಕಡೆ ಬಂದರು. ಅವನು ಮುಂದೆ ನಡೆದ, ಕಿಟ್ಟು ಹೋಟೆಲ್ ಒಳಹೊಕ್ಕ.

ಅಂಗಡಿ, ವ್ಯಾಪಾರ, ಸ್ವತಂತ್ರ ಜೀವನಗಳ ವಿಚಾರವೇ ಕಿಟ್ಟುವಿನ ತಲೆಯಲ್ಲಿ ಸುತ್ತಿಸುಳಿಯುತ್ತಿತ್ತು. ಅಂಗಡಿ ಮಾಡಿಕೊಳ್ಳಲು ಯೋಚಿಸಿದರೆ, ಬಾಡಿಗೆ, ಸಾಮಗ್ರಿಗಳನ್ನಿರಿಸುವ ಕವಾಟು, ಅದಕ್ಕೆ ಬೇಕಾದ ಮೂಲಧನದ ಚಿಂತೆ. ಕಡಿಮೆಯೆಂದರೆ ೫೦೦-೧೦೦೦ವಿಲ್ಲದೆ ಸಾಧ್ಯವಿಲ್ಲ. ಅನುಭವವಿಲ್ಲದ ತಾನು ಈ ದೊಡ್ಡ ಹೊಣೆಹೊತ್ತು ಮುಳುಗಿದರೆ? ಜತೆಗೆ, ಇಡೀ ದಿನ ಅಂಗಡಿಯಲ್ಲೇ ಇರಬೇಕಾದ ಪ್ರಮೇಯ ಬೇರೆ. ಶಾಲೆಗೆ ಹೋಗುವ ವಿಚಾರ ಕನಸಾಗುತ್ತದೆ. ಎಲ್ಲ ಬಗೆಗೂ ಯೋಚಿಸಿ ಕೊನೆಗೆ ಕಣ್ಣನ್ ನಾಯರ್‌ನ ಶಿಷ್ಯನಾಗುವುದೇ ಮೇಲೆಂದು ಕಿಟ್ಟು ನಿರ್ಧರಿಸಿದ.

ತಾನು ಯಾರು, ಯಾವ ಜಾತಿಯವನು ಎಂಬುದು ಈ ಊರಲ್ಲಿ ಯಾರಿಗೂ ತಿಳಿಯದು. ಬ್ರಾಹ್ಮಣನಾಗಿ ಈ ಕೆಲಸ ಮಾಡುವುದು ಸರಿಯಲ್ಲ ಎನ್ನುವವರೂ ಇಲ್ಲ. ಅನ್ನಕೊಡುವ ಯೋಗ್ಯತೆಯಿಲ್ಲದವರು ಜಾತಿಯ ಪ್ರಶ್ನೆಯೆತ್ತಿದರೆ ಅದಕ್ಕೆ ಸರಿಯಾದ ಉತ್ತರ ಕೊಡಲೂ ಅವನು ಹಿಂದಾಗು

ವವನಲ್ಲ. ಪರೋಪ ಜೀವಿಯಾಗದಿದ್ದರೆ ಸಾಕು, ಅದಕ್ಕಿಂತ ಮೇಲಿನ ಜಾತಿ ಬೇರಾವುದು? ಅವನ ಜಾತಿ, ಸಮಾಜ, ಧರ್ಮಗಳಿಗೆ ತಾಯಿ ಮೊದಲೇ ಆಹುತಿಯಾಗಿದ್ದಾಳೆ. ಈಗ ತಾನು ಇನ್ನೊಂದು ಹವಿಸ್ಸಾಗಲು ಆತ ಸಿದ್ಧನಿರಲಿಲ್ಲ! ಅವನಿಗೆ ಯಾರ ಅಂಜಿಕೆಯೂ ಇಲ್ಲ!

ಮುಂದಿನ ವಾರ ಅವನು ತನ್ನ ತಾಯಿಯನ್ನು ನೋಡಲು ಹೋಗಿದ್ದಾಗ ತನ್ನ ಯೋಜನೆಯನ್ನು ಅವಳ ಮುಂದಿರಿಸಿದ.

ಕೆಲವು ತಾಸುಗಳ ಕಾಲ ದುಡಿದರೂ ಸಾಕು; ಜೀವನ ಸಾಗಿಸ ಬಹುದು. ಅಕ್ಕಿ ಸೇರಿಗೆ ಎರಡಾಣೆ ಇರುವ ಈ ದಿನದಲ್ಲಿ ಜೀವನವೇನು ಕಷ್ಟ. ಒಂದೋ ಎರಡೋ ರುಪಾಯಿ ಕೊಟ್ಟರೆ ಪುಟ್ಟ ಕೋಣೆಯೂ ಸಿಗಬಹುದು. ತಾತನನ್ನೂ ಕರೆಸಿಕೊಂಡು ಮುಂದೆ ಶಾಲೆಗೂ ಸೇರ ಬಹುದು. ಎಂದು ತಾಯಿಗೆ ತಿಳಿಸಿದ.

ಮರುದಿನ ಮನೆಯಿಂದ ಹೊರಡುವಾಗ ಐಲೀನಾ ಐವತ್ತು ರೂಪಾಯಿ ಗಳನ್ನು ಅವನ ಕೈಯಲ್ಲಿಟ್ಟು, "ಸುಖವಾಗಿ ನಿನ್ನ ಜೀವನ ಸಾಗಿಸು ಮಗೂ" ಎಂದು ಹರಸಿದಳು. ನೀನಿರುವಲ್ಲಿಗೆ ನಾ ಬರಲಾರೆ; ನೀನೇ ಆಗಾಗ ಬಂದು ಈ ಹತಭಾಗ್ಯಳನ್ನು ಕಂಡು ಹೋಗು. ನನ್ನಿಂದಾದ ಸಹಾಯ ನಾನು ಮಾಡುತ್ತೇನೆ. ತಾತನನ್ನು ಸಾಕಿಸಲಹುವ ಭಾರ ನಿನ್ನದು-ಎಂದು ಕಂಬನಿ ಗರೆದಳು. ತುಂಬಿದ ಹೃದಯದಿಂದ ಕಿಟ್ಟು ಹೊರಟುಬಂದ.

ಕಿಟ್ಟುವಿನ ತೂಗಾಡುವ ಅಂಗಡಿ ಆರಂಭವಾಯಿತು. ನಾಲ್ಕು ತಿಂಗ ಳೊಳಗಾಗಿ ಮನೆಗೆ ಬೇಕಾದ ಪಾತ್ರೆಸಾಮಗ್ರಿಗಳನ್ನೂ ಸಂಗ್ರಹಿಸಿದ. ಕಣ್ಣನ್ ಮನೆಯ ಪಕ್ಕದಲ್ಲೇ ಚಿಕ್ಕದೊಂದು ಬಿಡಾರವೂ ದೊರೆಯಿತು. ತನ್ನ ನಯವಿನಯಗಳಿಂದ ಗಿರಾಕಿಗಳ ಗೆಳೆತನ ಸಂಪಾದಿಸಿ, ನಿರ್ದಿಷ್ಟ ಮನೋಭಾವದಿಂದ ಜೀವನಪಥದಲ್ಲಿ ಮುನ್ನಡೆಯಲೆಳಸಿದ ಕಿಟ್ಟು ನಿರಾಶ ನಾಗಲಿಲ್ಲ. ಅವನ ತೂಗಾಡುವ ಅಂಗಡಿ ಅವನಿಗೆ ಕೈದೀವಿಗೆಯಾಯಿತು.

# ಎಂಟು

ಅದುವರೆಗೆ ಮೈದಾನದ ಸುತ್ತಲೂ ತಲೆ ಎತ್ತಿ ನಿಂದ ಮರಗಳಲ್ಲಿ ತಂಗಿದ್ದ ಕಾಗೆಗಳು ತಮ್ಮ ಕೂಟ ಸಂಗೀತ ಆರಂಭಿಸಿ ಹಿಂಡು ಹಿಂಡಾಗಿ ಎಲ್ಲೋ ಕಟ್ಟಿದ್ದ ಗೂಡುಗಳೆಡೆಗೆ ಹಾರಲಾರಂಭಿಸಿದುವು. ನಾನಿನ್ನು ಹೋಗುತ್ತೇನೆ, ನನ್ನ ದಿನದ ದುಡಿಮೆಯಾಯಿತೆಂದು ಸೂರ್ಯ ಅರಬಿ ಸಮುದ್ರದಲ್ಲಿಳಿಯ ತೊಡಗಿದ್ದ. ಮೈದಾನು ಬರಿದಾಗುತ್ತ ಬಂದಿತ್ತು. ತನ್ನ ಅಂಗಡಿಯನ್ನು ಹೊತ್ತುಕೊಂಡು ಕಿಟ್ಟು ಬೊಕ್ಕಪಟ್ಣದ ಮಾರ್ಗವಾಗಿ ನಡೆದ.

ಅವನು ತಾಯಿಯನ್ನು ಕಾಣದೆ ಆಗಲೇ ಬಹಳ ದಿನಗಳಾಗಿತ್ತು. ಅವಳನ್ನೊಮ್ಮೆ ನೋಡಿ ಬರೋಣವೆಂದರೆ ಸಮಯಾವಕಾಶವೇ ಇಲ್ಲ ತಾನೇ ಅಡುಗೆ ಮಾಡಿಕೊಳ್ಳಬೇಕು; ತಾನೇ ದುಡಿಯಬೇಕು. ಮುಂಜಾನೆ ಎದ್ದು ಮನೆಗುಡಿಸಿ ಸಾರಿಸಿ ಅಡುಗೆ ಮಾಡಿ ಉಣ್ಣುವ ಹೊತ್ತಿಗೆ ಏನಿಲ್ಲೆಂದರೂ ಎಂಟು–ಎಂಟುವರೆ ಗಂಟೆಯಾಗುತ್ತಿತ್ತು. ಮಧ್ಯಾಹ್ನ ಎಲ್ಲಾದರೂ ಮರದಡಿಯಲ್ಲಿ ವಿಶ್ರಾಂತಿ ಬಿಸಿಲಿನ ಝಳ ಕಡಿಮೆಯಾಯಿತೆಂದರೆ ಪುನಃ ವ್ಯಾಪಾರ. ಸಂಜೆಯಾದೊಡನೆ ಮನೆ; ಗಂಜಿಬೇಯಿಸುವುದರ ಚಿಂತೆ.

ಈ ಚಟುವಟಿಕೆಯ ನಡುವೆ ಅಮ್ಮನನ್ನು ಕಾಣಲು ಅವನಿಗೆ ಸಮಯವೆಲ್ಲಿ? ಅತ್ತ ಹೋಗುವದಾದರೂ ಈ ತೂಗಾಡುವ ಅಂಗಡಿಹೊತ್ತುಕೊಂಡೇ ಹೋಗಬೇಕು. ತನ್ನ ಮಗನನ್ನು ಹೀಗೆ ದುಡಿಸುತ್ತಿದ್ದಾಳೆ ಎಂದು ಅವಳ ಗೆಳತಿಯರು ಆಕೆಯನ್ನು ಟೀಕಿಸಬಹುದು. ನನ್ನ ಈ ಕಣ್ಣಾನ್ ಶಿಷ್ಯತ್ವ ಅವಳಿಗೆ ಅತೃಪ್ತಿಕರವಾದರೂ ಆಗಬಹುದು. ನೆರೆಮನೆಯವರಿಗೆ ಮಾತಿಗೆ ಆಸ್ಪದವಾಗಲೂ ಬಹುದು. ಅವರಿಗೇನು ತಿಳಿದೀತು ಈ ತಾಯಿಮಕ್ಕಳ ಬಂಧ. ಅದು ತಿಳಿಯದಿದ್ದರೂ ನಷ್ಟವಿಲ್ಲ. ತಾಯಿಮಗ ಎಷ್ಟು ದೂರವಿದ್ದರೂ ಅವರ ಹೃದಯ ಯಾರೂ ಎಣಿಸದಷ್ಟು ಹತ್ತಿರವಿರುತ್ತದೆ. ಸಮಾಜದ ಕಣ್ಣಿಗೆ ಇದು ಹೇಗೆ ತಿಳಿಯಬೇಕು? ಆಕೆ ನನ್ನನ್ನು ಮರೆಯುವಂತಿಲ್ಲ; ನನಗಂತೂ ಅವಳನ್ನು ಮರೆಯುವುದು ಸಾಧ್ಯವಿಲ್ಲ. ಎಂದಾದರೊಮ್ಮೆ ನೋಡಿ ಬಂದರಾಯಿತು . . . . . ಆದರೆ . . . . ತಾತನ ಪತ್ರವೇ ಇಲ್ಲವಲ್ಲ . . . . . . ತಿಂಗಳೆರಡಾಯಿತು . . . . . . ಎಂದೂ ಇಷ್ಟು

ಉದಾಸೀನ ತೋರಿದವರಲ್ಲ ಆರೋಗ್ಯ ಚೆನ್ನಾಗಿಲ್ಲವೇ? . . . . . ಕೊಂಚ ನೆಗಡಿಯಾದರೂ ಕೂಡಾ ಬರೆಯುತ್ತಿದ್ದರು . . . . ಇಂದೇಕೆ ಹೀಗೆ . . . .?

ಯೋಚನಾತರಂಗ ಅವನನ್ನು ಮನೆಯ ವರೆಗೂ ಕರೆದು ತಂದಿತ್ತು. ಬಾಗಿಲು ತೆರೆದು ಒಲೆಹತ್ತಿಸಿದ. ನೀರು ತರಲು ಹೊರಟಾಗ ಬಾಗಿಲ ಹೊಸಲಿನ ಮಗ್ಗುಲಲ್ಲೇ ಒಂದು ಪತ್ರ ಬಿದ್ದಿತ್ತು. ಅಂಚೆಯವನು ಬಾಗಿಲ ಸಂದಿನಲ್ಲಿ ಅದನ್ನು ತುರುಕಿದ್ದನೆಂದು ಕಾಣುತ್ತೆ. ಕೈಗೆತ್ತಿಕೊಂಡ; ತಾತನ ಪತ್ರ ನೀರು ತಂದು, ಎಸರಿಟ್ಟು, ಒಲೆಯ ಒಳಿಕುಳಿತು ಕೊಂಡು ಅದನ್ನೋದಿದ.

" . . . . ನಾಗಪ್ಪಯ್ಯ ತೀರಿಕೊಂಡು ಒಂದು ತಿಂಗಳಾಯಿತು. ನನ್ನ ಬಗೆಗೆ ನಿನ್ನ ಚಿಂತೆ ಅಧಿಕವಾಗಬಹುದೆಂದು ನಾನು ಕಾಗದ ಬರೆದಿರಲಿಲ್ಲ. ಅಂತ್ಯ ಸಂಸ್ಕಾರಗಳೆಲ್ಲ ವೈಭವದಿಂದಲೇ ನೆರವೇರಿದುವು ಮೊನ್ನೆ ಮೊನ್ನೆ ನಿನ್ನ ಹಣದ ವಿಚಾರ ಬಂತು ನನಗೇನೂ ಆ ವಿಚಾರ ತಿಳಿಯದೆಂದು ಮಕ್ಕಳು ಹೇಳಿದರು. ಗೌರ, ನನಗೆಲ್ಲ ಗೊತ್ತು ಎಂದು ವಾದಿಸಿದ ಬಳಿಕ ಒಪ್ಪಿಕೊಂಡರು. ಮನೆಯ ವ್ಯವಸ್ಥೆಯೆಲ್ಲ ವಿಚಿತ್ರವಾಗಿದೆ. ನಾನೂ ಹೆಚ್ಚುಕಾಲ ಇಲ್ಲೇ ಇರುವುದು ಸಾಧ್ಯವಿಲ್ಲವೆಂದು ಕಾಣುತ್ತದೆ. ಸಾವಿರ ರೂಪಾಯಿ ಕೊಟ್ಟಿದ್ದಾರೆ . . . . ಉಳಿದ ಐನೂರು ಆ ಮೇಲೆ ಕೊಡುತ್ತಾ ರಂತೆ. ನಿನ್ನ ಆರೋಗ್ಯದ ಬಗೆಗೆ ಬರೆ . . . . ಇಂತಿ ಆಶೀರ್ವಾದ . . . ."

ದಿವಂಗತರಾದ ನಾಗಪ್ಪಯ್ಯನ ವಿಚಾರದಿಂದ ಕಿಟ್ಟುವಿಗೆ ಸಂತಾಪ ಮೂಡಿಲ್ಲವೆಂದಲ್ಲ. ಆದರೆ, ತಾತನ ಬಗೆಗೆ ಅವನ ಚಿಂತೆ ಅಧಿಕವಾ ಯಿತು. ಇದುವರೆಗೆ ಅವರು ಸುಖವಾಗೇ ಇದ್ದರು ಮನಕ್ಕೆ ನೆಮ್ಮದಿ ಇತ್ತೋ ಇಲ್ಲವೋ, ದೇಹಕ್ಕಂತೂ ಬಳಲಿಕೆಯಿರಲಿಲ್ಲ. ಯಾರೂ ಬಯಸ ದಿದ್ದರೂ ತನ್ನಿಂದಾದ ಚಿಕ್ಕಪುಟ್ಟ ಕೆಲಸಗಳನ್ನು ಮಾಡುತ್ತಿದ್ದರು. ಉಳಿದ ಸಮಯವೆಲ್ಲ ಪೂಜೆ, ಜಪ, ಜೈಮಿನಿ ಓದುವಿಕೆಗಳಲ್ಲಿ ಕಳೆದುಹೋಗಿತ್ತು. ಮನೆತುಂಬ ಮಕ್ಕಳು, ತಾತ-ತಾತ-ಎಂದವರ ಸುತ್ತು ಸೇರಿ ನಲಿದು ಕತೆ ಹೇಳಿ ಎಂದು ಪೀಡಿಸಿ ಅವರಿಗೆ ಹರ್ಷವನ್ನು ತಂದುಕೊಡುತ್ತಿದ್ದುವು. ಅವರು ಸುತ್ತಲ ಇತರ ಮಕ್ಕಳಿಗೂ ತಾತನಾಗಿದ್ದರು. 'ನೀನೊಬ್ಬ ಮಕ್ಕಳ ಗುರು' ಎಂದು ಅವರ ತಂಗಿ ಗೌರನು ಕೂಡಾ ಹಾಸ್ಯಮಾಡುತ್ತಿದ್ದರು.

ಇಂಥ ವಾತಾವರಣದಿಂದ ಬೇರೆಯಾಗಿ ದೂರ ಹೋಗಬೇಕೆಂದರೆ

ದುಃಖವಾಗಲಾರದು? ಇಲ್ಲಿಗೆ ಬಂದರೆ.....? ಏನಿಲ್ಲೆಂದರೂ ಸ್ವಲ್ಪ ಕೆಲಸವನ್ನಾದರೂ ಮಾಡಬೇಕಾಗಬಹುದು. ದಿನವಿಡೀ ಮನೆಯಲ್ಲೇ ಕುಳಿತು ಅವರ ಮನಸ್ಸೇ ಹಿಂಗಿ ಹೋಗಬಹುದು. ಆರೋಗ್ಯವೂ ಕೆಟ್ಟರೆ....? ಮಾತನಾಡಲು, ವಿಚಾರ ಮಾಡಲು ಯಾರೂ ಸಿಗು ವಂತಿಲ್ಲ. ಪಕ್ಕದ ಮನೆಯಲ್ಲಿ ಯಾರಿದ್ದಾರೆ, ಯಾರಿಲ್ಲ ಎಂಬುದನ್ನೂ ತಿಳಿಯಬಯಸದ ಜೀವನ ಪಟ್ಟಣದ್ದು. ಅಂತೂ ಕೊನೆಯ ದಿನಗಳಲ್ಲಿ ಸೆರೆಮನೆಯ ಬಾಳನ್ನವರು ಬಾಳಬೇಕಾಗುತ್ತದೆ–ಎಂದು ಕಿಟ್ಟುವಿಗೆ ಬೇಸ ರವೂ ಆಯಿತು.

ಆದರೆ.... ಅವರನ್ನು ಅಲ್ಲೇ ಇದ್ದುಬಿಡಿರಿ ಎನ್ನಲು ಸಾಧ್ಯವಿಲ್ಲ. ಒಮ್ಮೆ ಮನೆಯವರಿಗೆ ಬೇಡವಾದ ಬಳಿಕ ಅವರಿಗೆ ಹೊರೆಯಾಗಿರುವುದು ಮುಳ್ಳಿನ ಹಾಸಿಗೆಯಾಗುತ್ತೆ. ತಾತನನ್ನೂ ಕರೆಸಿಕೊಂಡು ತನ್ನ ಬಳಿ ಇರಿಸಿಕೊಳ್ಳುವುದೇ ಮೇಲು. ಕೆಲದಿನ ಅವರಿಗೆ ಈ ಬಾಳು ಕಷ್ಟವಾಗ ಬಹುದು. ಮುಂದೆ ಅದೇ ಒಗ್ಗುತ್ತೆ.... ಎಂದು ನಿರ್ಧರಿಸಿದ ಕಿಟ್ಟು.

ಗಂಜಿಯಾಯಿತು. ಉಂಡು; ಮಲಗೋಣವೆಂದು ಚಾಪೆಯನ್ನೂ ಅದರ ಮೇಲೊಂದು ಗೋಣಿಯ ಚಿಂದಿಯನ್ನೂ ಹಾಸಿಕೊಂಡ ಆದರೂ ಯಾಕೋ ಮನಸ್ಸು ಸ್ಥಿರವಾಗಿಲ್ಲ; ತಲೆಯಲ್ಲಿ ಯೋಚನೆಗಳು; ನಿದ್ದೆ ಗಾವುದ ದೂರ ಹಾರಿಹೋಗಿದೆ. ಇಬ್ಬರ ಜೀವನ ಸಾಗಬೇಡವೇ? ಅಂದರೆ ಅಂದರೆ, ಹೆಚ್ಚಾಗಿ ದುಡಿಯಬೇಕು. ಮುಂದೆ ಶಾಲೆಗೆ ಸೇರಿಕೊಳ್ಳಬೇಕೆಂಬ ಆಶೆ ಫಲಿತವಾದೀತೇ? ಇಂದಿನ ದುಡಿಮೆಯೇ ಮುಂದೆಯೂ ಇರುತ್ತೆ ಎಂಬ ಭರವಸೆ ಹೇಗೆ? ತಾತನ ಆರೋಗ್ಯ ಕೆಟ್ಟರೆ? ತಾನೇ ಹಾಸಿಗೆ ಹಿಡಿದರೆ? ನೋಡಿಕೊಳ್ಳುವವರು ಯಾರು?.... ದುಡಿಯುವವರು...?

ಬಾಗಿಲು ಮುಚ್ಚಿ ಕಿಟ್ಟು ಅಂಗಳಕ್ಕೆ ಇಳಿದ. ಬೆಳದಿಂಗಳು ಹಾಲು ಚೆಲ್ಲಿದಂತಿತ್ತು. ಯೋಚಿಸುತ್ತಲಿದ್ದಂತೆ ಅವನ ಕಾಲುಗಳು ಮುನ್ನಡೆದುವು. ಸ್ವಲ್ಪ ದೂರದಲ್ಲೇ ಶ್ಮಶಾನ. ಅದರೊಳಗೆ ನಡೆದು ಕೆರೆಯ ಕಟ್ಟೆಯ ಮೇಲೆ ಕುಳಿತುಕೊಂಡ. ಯಾರೂ ಇಲ್ಲದ ಸ್ಥಳ, ತಾನೇ ತಾನಾಗಿ ಎಷ್ಟು ಹೊತ್ತು ಬೇಕಾದರೂ ಯೋಚಿಸಬಹುದು. ಶ್ಮಶಾನದ ಬಗೆಗೆ ಸಾವಿರ ಕತೆಗಳನ್ನು ಹೇಳುವವರಿದ್ದಾರೆ. ಆದರೆ, ಯಾರೂ ದಿಕ್ಕಿಲ್ಲದ ತಾನೇ ಎಲ್ಲಕ್ಕೂ ದೊಡ್ಡ ದೆವ್ವ ಎಂಬ ಹೆಮ್ಮೆ ಕಿಟ್ಟುವಿಗೆ. ಪ್ರಶಾಂತ ಬೆಳದಿಂಗಳು,

ತಂಗಾಳಿಗಳು ಅವನ ಮನಸ್ಸಿಗೆ ಕೊಂಚ ನೆಮ್ಮದಿಯನ್ನು ತಂದುಕೊಟ್ಟವು.

. . . . . ದಿನಕ್ಕೆ ಎರಡು ಪಾವು ಅಕ್ಕಿ ಅಥವಾ ಮೂರು ಪಾವು . . . ಅಂತೂ ಎರಡಾಣೆ ಖಂಡಿತ ಸಾಕು . . . . . . . ಉಪ್ಪು, ಹುಳಿ, ಮೆಣಸು, ಕಟ್ಟಿಗೆ, ಬಾಡಿಗೆ, ಸೀಮೆ ಎಣ್ಣೆ . . . . ಕಿಟ್ಟು ಒಂದೊಂದಾಗಿ ಎಣಿಕೆ ಹಾಕಿದ. ತಿಂಗಳಿಗೆ ಹತ್ತು ರುಪಾಯಿಗಳಿದ್ದರೆ ಸಾಕು. ಹೊಟ್ಟೆತುಂಬ ಅನ್ನವನ್ನಾದರೂ ಉಂಡುಕೊಂಡಿರಬಹುದು. ತಾನು . . . ಅಷ್ಟು ಸಂಪಾದಿಸಬಲ್ಲೆ; ಈಗಲೇ ಸಂಪಾದಿಸುತ್ತಿದ್ದೇನೆ . . . .

ತಾತನನ್ನು ಸಲಹುವ ಚಿಂತೆ ಕಡಿಮೆಯಾಯಿತು. ಆಗಲೇ ನೂರು ರುಪಾಯಿ ಕೂಡಿಸಿದ್ದಾನೆ–ಸ್ಕೂಲಿಗೆ ಸೇರುವ ಆಶೆಯಿಂದ. ಕಾಸಿಗೆ ಕಾಸು ಸೇರಿಸತೊಡಗಿದ್ದಾನೆ. ತಾನೂ ವಿದ್ಯಾವಂತನಾಗಬೇಕು, ತನ್ನ ಜೀವನ ಹಸನು ಮಾಡಿಕೊಳ್ಳಬೇಕು; ಸಮಾಜದಲ್ಲಿ ಒಬ್ಬ ವ್ಯಕ್ತಿಯಾಗಿ ಬಾಳಿ ಹತ್ತು ಮಂದಿಯ ವಿಶ್ವಾಸಕ್ಕೆ ಪಾತ್ರನಾಗಬೇಕು ಎಂಬುದವನ ಮಹದಾಶೆ. ಯೋಚಿಸಿದಷ್ಟಕ್ಕೂ ಅವನಲ್ಲಿ ಧೈರ್ಯ ಹೆಚ್ಚಿತು. ತಾತನನ್ನು ಕರೆಸಿಕೊಳ್ಳಲು ನಿರ್ಧರಿಸಿದ.

ಎಷ್ಟು ಹೊತ್ತಾಗಿತ್ತೊ? ಮನೆಗೆ ನಡೆಯೋಣವೆಂದು ಎದ್ದು ಹೊರಟ ಸ್ವಲ್ಪ ದೂರದಲ್ಲಿ ಮಂಟಪದಲ್ಲಿ ಯಾರೋ ಕುಳಿತಿದ್ದಂತೆ ಕಾಣಿಸಿತು. ಆ ಮಂಟಪದೊಳಗಣ ಕತ್ತಲೆಯಲ್ಲಿ ಅವರ ಗುರುತು ಹಿಡಿಯುವುದು ಸಾಧ್ಯವಿರಲಿಲ್ಲ. "ಯಾರಪ್ಪ ಅದು . . . . . . " ಎಂದು ಆ ವ್ಯಕ್ತಿಯೇ ಪ್ರಶ್ನಿಸಿದ.

ಕಿಟ್ಟು ಆ ವ್ಯಕ್ತಿಯ ಸನಿಹಕ್ಕೆ ನಡೆದ. ಸುಮಾರು ಮೂವತ್ತು ವರ್ಷದವನಿರಬಹುದು. ತುಂಬುದೇಹ, ದೃಢಕಾಯ, ಸುಖವಾಗಿ ಬೆಳೆದ ಬಾಳಿನ ನೆನಪುಕೊಡುವ ಮುಖ. ಆದರೆ ಅವನಿಗೆ ಅವನನ್ನು ನೋಡಿದ ನೆನಪು ಬರಲಿಲ್ಲ.

"ಬೀಡಿ ಬೀಡಾ ಮಾರಾಟ ಮಾಡುವ ಹುಡುಗನಲ್ಲವೇ ನೀನು?"

"ಹೌದು ಸ್ವಾಮಿ."

"ಇಲ್ಲೇನು ಮಾಡುತ್ತೀಯಾ ಈ ಹೊತ್ತಿನಲ್ಲಿ. ತಾಸು ಹನ್ನೆರಡಕ್ಕೆ ಹತ್ತಿರವಾಯಿತು."

"ಏನೋ ಯೋಚನೆ ಬಂತು, ನಿದ್ದೆ ಬರಲಿಲ್ಲ. ಇಲ್ಲೇ ಹತ್ತಿರದಲ್ಲೇ ಇದೆ ನನ್ನ ಗುಡಿಸಲು. ತಿಂಗಳೂ ಇದೆ–ಎಂದು ಬಂದೆ."

"ಇಂಥ ಸ್ಥಳಕ್ಕೆ ಇಷ್ಟು ಹೊತ್ತಿನಲ್ಲಿ ಬರಬಾರದಪ್ಪ–ಎಳೆ ಮನಸ್ಸು; ಎಲ್ಲಾದರೂ ಅಳುಕೀತು."

"ನನಗೇನು ಹೆದರಿಕೆ ಸ್ವಾಮಿ. ನನ್ನನ್ನು ಯಾರೇನು ಮಾಡುತ್ತಾರೆ?"

"ಮನೆಯಲ್ಲಿ ಯಾರೂ ಇಲ್ಲವೇ?"

ಕಿಟ್ಟು ತನ್ನ ಕತೆಯನ್ನೆಲ್ಲ ಹೇಳಿದ. ತಾಯಿಯ ವಿಷಯ ಮಾತ್ರ ಆಡಲಿಲ್ಲ.

"ಅವಳು ಅವಳ ಗಂಡನ ದಾರಿ ಹಿಡಿದಳು."

ಅವನಿಗೆ ಮುಂದೆ ಮಾತು ಹೊರಡಲಿಲ್ಲ. ತಾನು ಹೀಗೆನ್ನಬಾರದಿತ್ತೆಂದೂ ತೋರಿತು. ಆದರೆ, ತಾಯಿಯ ವಿಚಾರವಾಗಿ ತಾನೇ ಇತರರಿಗೆ ಆಡಿಕೊಳ್ಳಲು ಆಸ್ಪದಕೊಡಬಾರದೆಂದೂ ಅವನ ಮನ ಹೇಳಿತು. ತಾನೇ ಅಪಪ್ರಚಾರ ಆರಂಭಿಸಿದರೆ? ಅವಳ ಬಗೆಗೆ ಸಹಾನುಭೂತಿ ವ್ಯಕ್ತಪಡಿಸುವ ಹೃದಯ ಈ ಸಮಾಜಕ್ಕೆ ಇದ್ದರೆ ಎಲ್ಲ ವಿಚಾರ ತಿಳಿಸಬಹುದು. ಆದರೆ, ಹಾಗಿಲ್ಲ. ಹಾಗೇ ಶ್ಮಶಾನದಲ್ಲೇ ಕುಳಿತು ಹೀಗೆ ಬರಬಾರದು–ಎಂದು ಉಪದೇಶಿಸುವ ಆ ವ್ಯಕ್ತಿಯ ಬಗೆಗೆ ಅವನಿಗೂ ಕುತೂಹಲ ಕೆರಳಿತು.

"ನಿಮ್ಮ ವಿಷಯ ತಿಳಿಸಲೇ ಇಲ್ಲ."

"ಅದನ್ನು ತಿಳಿದೇನು ಮಗು? ಸಮಾಜದಲ್ಲಿ ಇಂಥ ಸಾವಿರ ಕತೆಗಳಿವೆ."

"ನಿಜ ಸ್ವಾಮಿ. ಆದರೆ, ಅಂತಹ ಕತೆಗಳನ್ನು ಅನುಭವಿಸಿದ ಜೀವಿಗೆ ಇನ್ನೊಬ್ಬರ ಆ ಕತೆಗಳನ್ನು ಕೇಳುವ ಆಶೆ ಅಧಿಕ. ತಮ್ಮ ದುಃಖದ ಬಗೆಗೆ ನಾನು ತಿಳಿಯಬಾರದೇನು? ನನಗೇನೋ ನನ್ನ ಸಂಕಟವನ್ನು ಇನ್ನೊಬ್ಬನಲ್ಲಿ ಹೇಳಿದಷ್ಟು ನೆಮ್ಮದಿ!

"ಅದು ಮನುಷ್ಯ ಗುಣ, ಎಂತಲೇ ಆತ ಇನ್ನೊಬ್ಬರನ್ನು, ಸಮಾಜವನ್ನು ಹೊಂದಿಕೊಂಡು ಬಾಳಿ ಬದುಕಿದ್ದಾನೆ. ಇಲ್ಲವಾದರೆ ಒಂಟಿಬಾಳು ಬಾಳುತ್ತಿದ್ದನೋ ಏನೊ?"

"ತಮ್ಮ ಊರು . . . . . . . ."

"ಹೋದಲ್ಲಿ . . . . ಬಂದಲ್ಲಿ. ಮನೆ . . . . . ತಂಗಿದಲ್ಲಿ. ನಾನು ಈ ಊರುಬಿಟ್ಟು ಎಷ್ಟೋ ಕಾಲವಾಗಿತ್ತು. ಕೆಲದಿನಗಳ ಹಿಂದೆ ಬಂದೆ.

ಇನ್ನು ಕೆಲದಿನಗಳಲ್ಲಿ ಹೊರಟುಹೋಗುತ್ತೇನೆ."

"ಅಂದರೆ . . . . ಉದ್ಯಮ?"

"ಉದ್ಯಮಕ್ಕೆ ಕಟ್ಟು ಬೀಳಬೇಕಾದ ಬಾಳಲ್ಲ ನನ್ನದು ತಮ್ಮಾ. ಎಂತಲೇ ಈ ದುರ್ಗತಿಗಳಿಗೆ. ಎಲ್ಲ ವೈಭವವನ್ನು ಅನುಭವಿಸಲು ಬೇಕಾದಷ್ಟು ಜಮೀನನ್ನು ನನ್ನ ತಂದೆ ಬಿಟ್ಟುಹೋಗಿದ್ದರು. ಯಾವ ಸುಖಕ್ಕೂ ನನಗೆ ಕಡಿಮೆಯಿರಲಿಲ್ಲ."

"ಎಷ್ಟು ಓದಿದಿರಿ ಸ್ವಾಮಿ?"

"ಕಾಲೇಜಿನ ಮೆಟ್ಟಿಲೇರಿದ್ದೆ—ಅಷ್ಟೆ! ಹೈಸ್ಕೂಲಿನಲ್ಲಿರುವಾಗಲೇ ಯಾರೋ ನನಗೆ ತಗಲಿಕೊಂಡರು. ಅಂದರೆ . . . . . . ನಾನೇ ಅವರಿಗೆ ಅಂಟಿಕೊಂಡೆ ಅನ್ನು" ಎಂದು ಆತ ನಕ್ಕ.

"ಅಂದರೆ . . . . . ?"

"ತರುಣಿಯೊಬ್ಬಳ ಪರಿಚಯವಾಯಿತು. ಅವಳ ಸೌಂದರ್ಯಕ್ಕೆ ಸೋತೆ; ಮಾತುಕತೆಗಳಿಗೆ ಮೈಮರೆತೆ; ನಯವಿನಯಗಳಿಗೆ ಮೋಸಹೋದೆ. ಅವಳನ್ನಗಲುವುದೇ ಅಸಾಧ್ಯವಾಯಿತು ನನಗೆ. ಕೈತುಂಬ ಕಾಸು; ಪೂರ್ಣ ಸ್ವಾತಂತ್ರ್ಯ—ನನಗೆ. ಮತ್ತೇನು? ಅವಳ ಬಳಿ ಕುಳಿತರೆ ಸಾಕು; ಅವಳು ಮಾತನಾಡುತ್ತಿದ್ದರೆ ಸರಿ—ನನಗೆ ಬೇರೆ ಸ್ವರ್ಗ ಕಾಣುವ ಬಯಕೆ ಉಂಟಾಗುತ್ತಿರಲಿಲ್ಲ."

"ಅವಳು . . . . . . ನಿಮ್ಮನ್ನು . . . ."

"ಹೌದು—ಪ್ರೀತಿಸುತ್ತಿದ್ದಳು. ಹಾಗೆಂದು ನನಗಾಗ ತೋರುತಿತ್ತು. ನೀನೇ ಪರದೈವ ಎಂಬ ಭಾವ ಅವಳಲ್ಲಿದೆ ಎಂದು ಎಣಿಸಿದ್ದೆ. ನಾನೂ ಅವಳಿಗರ್ಪಿಸಿದ ಉಡುಗೊರೆಗಳಿಗೆ ಲೆಕ್ಕವಿಲ್ಲ. ಹಣವೆಷ್ಟೋ ತಿಳಿಯದು. ಆ ಪ್ರಾಯ; ಯವ್ವನ; ಹುಚ್ಚನಂತೆ ನಾನವಳಿಗೆ ಸೋತೆ."

"ಅವಳನ್ನು ವಿವಾಹವಾದಿರೇನು . . . . ?

"ಹಾಗಾಗಿದ್ದರೆ ಹೀಗಾಗುತ್ತಿರಲಿಲ್ಲವೋ ಏನೊ? ಆದರೆ, ಅದು ಸಾಧ್ಯವಾಗಲಿಲ್ಲ. ನನ್ನ ಬಂಧುಗಳಾರೂ ಅಡ್ಡ ಬರಲಿಲ್ಲವಾದರೂ ಅದೇಕಾಗಿಲ್ಲಿಲ್ಲ ಎಂದು ನಾ ಹೇಳಲಾರೆ. ಬಂಧುಗಳಿಗೆ ವಿಚಾರ ತಿಳಿದಾಗ ಹಣ ನನ್ನ ಕೈಗೆ ಬರುವುದು ಕಡಿಮೆಯಾಯಿತು, ಅಷ್ಟೆ. ತಾಯಿಯೇನೋ ನನ್ನ ವರ್ತನೆಯನ್ನು ಒಪ್ಪಲಿಲ್ಲ. ನನಗಾಗ ಆ ತರುಣಿಯನ್ನುಳಿದು

ಬೇರೆ ಯಾರೂ ಬೇಕಾಗಿರಲಿಲ್ಲ . . . ."

"ಮುಂದೆ . . . . ?"

"ಹೆಣ್ಣು-ಗಂಡಿನ ಪ್ರೇಮದ ಮುಂದೆ ಯಾವ ಸುಖವೂ ಇಲ್ಲ ಎಂದು ತಿಳಿದಿದ್ದೆ ನಾನು. ಆದರೆ, ಹೆಣ್ಣಿಗೆ ಬೇಕಾದುದು ಗಂಡು ಮಾತ್ರವೇ ಅಲ್ಲ; ಅವನ ಸ್ಥಾನ, ಮಾನ, ಗೌರವಗಳೂ ಬೇಕಾಗುತ್ತವೆ ಎಂದು ನನಗಾಗ ತೋರಿತು. ಗಂಡಿನಷ್ಟು ಕುರುಡು ಹೆಣ್ಣಲ್ಲ; ಹಾಗೆಂದು ಆಕೆ ಅದನ್ನು ತೋರ್ಪಡಿಸಿಕೊಳ್ಳುವುದೂ ಕಡಿಮೆ ಎಂಬುದು ನನಗೆ ತಿಳಿದಿರಲಿಲ್ಲ. ಆಕೆಯ ದೃಷ್ಟಿ ನನ್ನ ಧನದ ಕಡೆಗಿತ್ತು, ಮನದ ಕಡೆಗಿರಲಿಲ್ಲ."

"ಅಂದರೆ . . . . "

"ಒಂದು ದಿನವಾಗಿ ಕಂಡಿದ್ದ ಒಂದು ವರ್ಷ ಉರುಳಿತು. ಎಂದೆಂದೂ ಒಬ್ಬರನ್ನೊಬ್ಬರು ಕೈಬಿಡುವುದಿಲ್ಲವೆಂದು ಆಣೆಮಾಡಿಕೊಂಡಿದ್ದೆವು. ಎಲ್ಲ ದೇವರೂ ನಮಗೆ ಸಾಕ್ಷಿಯಾದರು. ಪಾಪ! ಕಾಣದ ದೇವರ ಸಾಕ್ಷಿ ಯಾವ ಕೋರ್ಟಿನಲ್ಲಿ ನಡೆಯುತ್ತೆ. ಒಂದುದಿನ ನಾನವಳಲ್ಲಿಗೆ ತೆರಳಿದಾಗ ಆಕೆ ಅಲ್ಲಿರಲಿಲ್ಲ. ಅಳಿಯನ ಕುರುಡು ಬೆಳಗಾದೊಡನೆ ಬಯಲಾಯಿತು."

"ಎಲ್ಲಿ ಹೋದಳೊ?"

"ಅದು ನನಗೆ ತಿಳಿಯದು. ಆಗ ತಿಳಿಯದಿದ್ದರೆ ನಾನು ಸತ್ಯವಾನನ ಬೆನ್ನುಹತ್ತಿದ ಸಾವಿತ್ರಿಯಾಗುತ್ತಿದ್ದೆನೋ ಏನೊ? ಅವಳನ್ನೊಯ್ದ ಯಮನ ಹಿಂದೆ ಓಡುತ್ತಿದ್ದೆ. ಆಕೆಯ ತಾಯಿ ಅವಳನ್ನು ಯಾರ ಜತೆಗೋ ಅಟ್ಟಿದ್ದಳು. ಯಾರನ್ನೋ ವಿವಾಹವಾಗಿ ಅವಳೆಲ್ಲೋ ಹೋದಳು. ನನಗಿಂತ ಅಧಿಕ ಹಣವುಳ್ಳವನ ಬೆನ್ನುಹತ್ತಿರಬಹುದು ಆಕೆ. ಅಂತೂ ಒಂದು ವರ್ಷದ ಸುಖ ನನಗಿತ್ತಳು . . . . ಹೋಗಲಿ . . . . ಎಲ್ಲಾದರೂ ಸುಖವಾಗಿದ್ದರೆ ಸರಿ; ಎಂದು ನಿಟ್ಟುಸಿರಿಬಿಟ್ಟ ಆ ವ್ಯಕ್ತಿ.

"ಪ್ರೀತಿ-ವಿಶ್ವಾಸ ಹೀಗೂ ಆಗುತ್ತೇಯೇ?"

"ಹಾಗೆ ತಿಳಿದುದು ಆ ಬಳಿಕ ನನಗೆ. ಹೊರಗಣ ದೂರದ ನೋಟಕ್ಕೆ ನೀನು ಬೀಡಿ ಬೀಡಾ ಮಾರಾಟ ಮಾಡುವ ಹುಡುಗ. ನಿನ್ನೊಡನೆ ಮಾತನಾಡುತ್ತ, ನನಗೆ ನಿನ್ನ ಯೋಗ್ಯತೆ, ಸಂಸ್ಕೃತಿ, ಹೃದಯಗಳ ಅರಿವಾಯಿತು. ಬಂಗಾರವನ್ನು ಒರೆದು ನೋಡಬೇಕು. ಮನುಷ್ಯನನ್ನು ಮಾತ್ರ ಒರೆದು, ಅರೆದು, ಮುರಿದು, ತೊರೆದು ನೋಡಿದರೂ ಕೂಡಾ

ಅರ್ಥಮಾಡಿಕೊಳ್ಳುವುದು ಕಷ್ಟ! ಜತೆಗೆ ಚಿನ್ನಕ್ಕೆ ಪುತ್ಥಳಿಯನ್ನು ಸೇರಿಸಲು ನಾವು ಯತ್ನಿಸಬೇಕು, ಪಿತ್ತಾಳೆಯನ್ನಲ್ಲ. ಅಮರಪ್ರೇಮ, ಅಸಮಾನ ಪ್ರೇಮಗಳನ್ನು ಹುಡುಕುತ್ತ ನಾವು ಮುನ್ನಡೆಯುತ್ತೇವೆ. ನಮ್ಮ ಆ ಎಳೆಯ ದೃಷ್ಟಿಗೆ ಎಲ್ಲೆಲ್ಲೂ ಅದರ ಮರೀಚಿಕೆ ಕಂಡುಬರುತ್ತದೆ. ಆದರೆ ನಮ್ಮಂತೆ ಅಂಥ ಅಮರ ಪ್ರೇಮವನ್ನು ಬಯಸಿಬಂದ ಹೆಣ್ಣು ಸಿಗಬೇಡವೇ? ಹಾಗಾದಾಗ ನಮ್ಮ ಕನಸು ನಿಜವಾಗಬಹುದು. ಆದರೆ, ಹಾಗೆ ಒಂದೇ ಭಾವದ ಎರಡು ಹೃದಯಗಳು ಒಂದಾದುದನ್ನು, ಒಂದಾದರೂ ಮುಂದೆ ಬಾಳಿದುದನ್ನು ನಾನೀ ಜಗತ್ತಿನಲ್ಲಿ ಕಂಡಿಲ್ಲ. ಬಿಸಿಲುಗುದುರೆಯನ್ನು ಕಂಡು, ನಂಬಿ, ಅದರ ಬೆನ್ನುಹತ್ತಿ, ಮುಗ್ಗರಿಸಿದಾಗಲೇ ಬುದ್ಧಿ ಬರುತ್ತೆ."

"ದೇವರ ಹಾಗೆ..... ಅಲ್ಲವೇ ಸ್ವಾಮಿ. ದೇವರನ್ನು ಹುಡುಕಿ ಕೊಂಡು ನಾವು ಹೊರಟರೆ ಸಾಲದು; ಅವನೂ ಭಕ್ತನನ್ನು ಹುಡುಕುತ್ತ ಬರಬೇಕು. ಆಗಲೇ ಕೈವಲ್ಯ–ಎಂದು ನನ್ನ ತಾತ ಹೇಳುತ್ತಿದ್ದರು. ಇಲ್ಲ ವಾದರೆ, ಅಳುವ ಹುಡುಗನ ಕಣ್ಣೊರಸಿ ಬೆನ್ನುತಟ್ಟಿದಂತೆ ಅವನೂ ಕಣ್ಣೊರಸಿ ಬೆನ್ನುತಟ್ಟಿ ಹೋಗುತ್ತಾನಂತೆ."

"ನಿಜ! ಅವರ ಮಾತು ಅನುಭವದ ಪ್ರತೀಕ. ಈ ವಿವೇಕ ಆಗ ನನ್ನಲ್ಲಿ ಮೂಡಲಿಲ್ಲ. ಆ ಪ್ರೇಮಭಂಗ ನನ್ನನ್ನು ಹುಚ್ಚನನ್ನಾಗಿಸಿತು. ದೊರೆತರೆ ಅವಳೇ, ಇಲ್ಲವಾದರೆ ಯಾರೂ ಬೇಡ–ಎಂಬ ಪ್ರವಾಹಕ್ಕೆ ಸಿಲುಕಿ ಊರನ್ನೇ ಬಿಟ್ಟುಬಿಟ್ಟೆ."

"ಸನ್ಯಾಸಿಯಾದಿರೇನು?"

"ಹಾಗಾಗುವುದು ಬಹು ಸುಲಭ. ಹೆಚ್ಚಿನವರು ನನ್ನಂತೆ ಜೀವನದ ವಿಚಿತ್ರ ಅನುಭವಗಳ ಪರಿಣಾಮವಾಗೇ ಸನ್ಯಾಸಿಗಳಾದವರು. ಹೆಣ್ಣಿನ ಮೇಲಿನ ಸೇಡು ತೀರಿಸಿಕೊಳ್ಳಬೇಕು. ತನ್ನನ್ನು ನಿರಾಕರಿಸಿದವಳ ಮುಂದೆಯೇ ತಾನು ಮನ್ಮಥ, ತನ್ನೆಡೆ ಬರುವವರು ಅಗಣಿತ, ಯಾರನ್ನು ಬೇಕಾದರೂ ತಾನು ತನ್ನವಳಾಗಿ ಮಾಡಿಕೊಳ್ಳಬಲ್ಲೆ ಎಂದು ತೋರಿಕೊಡ ಲೆಂದೇ ಸನ್ಯಾಸಿಗಳಾಗಿ ಕಾಮಕೇಳಿಯಲ್ಲಿ ಮುಳುಗುತ್ತಾರೆ. ಇನ್ನು ಕೆಲವರು ತಮ್ಮ ತಾರುಣ್ಯದಲ್ಲಿ ತಾವು ನಡೆಸಿದ ಅಮಾನುಷೀಯ ಅನೀತಿ ಗಳ, ಜನತೆಯನ್ನು ಹಿಂಸಿಸಿ ಕೊಂದು ನಲಿದ ಕರ್ಮಗಳ ಪ್ರತೀಕವಾಗಿ ಸನ್ಯಾಸಿಗಳಾಗುತ್ತಾರೆ. ಜನ ತಮ್ಮನ್ನು ಅಧಿಕಾರಹೀನರಾದಾಗ ಕೊಂದು

ಹಾಕಬಹುದೆಂದು ಹೆದರಿಯೇ ಕಾವಿಬಟ್ಟೆ ತೊಟ್ಟು, ಹೆಸರು ಬದಲಾಯಿಸಿ ಕೊಂಡು, ಧರ್ಮದ ಗೋಡೆಕಟ್ಟಿಕೊಂಡು ಬಾಳುವ ದುರ್ಯೋಧನರಾಗುತ್ತಾರೆ. ಹೇಗಾದರೂ ಬಾಳಿದರೆ ಸರಿ ಎಂದು ಈ ದಾರಿ ಹಿಡಿವವರನ್ನು, ಅಂತೂ ತಮ್ಮ ಜೀವನವನ್ನು ಹಸನುಮಾಡಿ, ಪವಿತ್ರಗೊಳಿಸಿ, ದೇವರನ್ನು ಹುಡುಕಲೆಂದು ಸನ್ಯಾಸಿಯಾದವರನ್ನು ನಾನಿನ್ನೂ ಕಂಡಿಲ್ಲ.

"ನೀವು . . . . ಮತ್ತೆ . . . .?"

"ನಾನೂ ಇಂಥ ಒಬ್ಬ ಸನ್ಯಾಸಿಯಾಗಲು ಹೊರಟೆ. ನನ್ನ ಪಾಲಿನ ಜಮೀನನ್ನೆಲ್ಲ ಅಣ್ಣನಿಗೇ ಬಿಟ್ಟುಕೊಟ್ಟು, ಸ್ವಲ್ಪ ಹಣ ಹಿಡಿದುಕೊಂಡು ಲಂಕೆಯಿಂದ ಹಿಮಾಲಯದ ವರೆಗೂ ಸುತ್ತಾಡಿದೆ. ಮುಂಡೆ ಬೋಳಿಸಿಕೊಂಡು, ಕಾವಿತೊಟ್ಟು ಸನ್ಯಾಸಿಯ ವೇಷ ಧರಿಸಿದೆ. ಪುಣ್ಯಕ್ಷೇತ್ರಗಳನ್ನೆಲ್ಲ ನೋಡಿದೆ; ನೂರಾರು ಮಠಗಳನ್ನು ಮನೆಯಾಗಿ ಮಾಡಿಕೊಂಡೆ. ಕೊನೆಗೆ ದಕ್ಷಿಣಭಾರತದ ಒಂದು ಆಶ್ರಮಕ್ಕೆ ಬಂದೆ . . . . .

"ಹೆಸರು . . . . "

"ಅದರಿಂದೇನು? ಹತ್ತರಲ್ಲಿ ಹನ್ನೊಂದು. ಅಲ್ಲಿ ಕಳೆದ ಎರಡು ವರ್ಷಗಳಿಂದ ಜೀವನ ನಡೆಸುತ್ತಿದ್ದೆ. ಅದು ತುಂಬ ಬದಲಾಯಿತು, ವಿದ್ಯಾ ಕೇಂದ್ರವಾಯಿತು, ಸಮಾಜಸೇವಾ ನೆಲೆಯಾಯಿತು. ನಾನೂ ಸ್ವಾಮಿಜಿಯೂ ಜತೆಯಾಗೇ ದುಡಿದೆವು. ಅದು ಸಾಂಸ್ಕೃತಿಕ ಕೇಂದ್ರವಾಯಿತು.

"ಅದನ್ನೇಕೆ ಬಿಟ್ಟಿರಿ? ನನ್ನಂಥ ನೂರಾರು ಮಕ್ಕಳಿಗೆ ತಾವು ದಾರಿ ತೋರಿದ ಪುಣ್ಯ ಕಟ್ಟಿಕೊಂಡಿರಿ."

"ಅದನ್ನು ನಾನಿನ್ನೂ ಹೇಳಲಾರೆ. ಬಿತ್ತಿದರೆ ಸಾಲದು ಫಲದೊರೆಯಬೇಕು. ಅದನ್ನು ಜನ ಉಂಡು ತೃಪ್ತರಾಗಲೂ ಬೇಕು. ಈ ನಡುವೆ ಅಲ್ಲೊ ಹೆಣ್ಣಿನ ಕಣ್ಣು ನನ್ನ ಮೇಲೆ ಬಿತ್ತು. ನಾನು ಅದಕ್ಕೆ ಸೋಲಲಿಲ್ಲ. ಎಂತಲೇ 'ನಾನೇ ಅವಳ ಬೆನ್ನುಹಿಡಿದೆ' ಎಂಬ ಅಪವಾದನೆ ಬಂತು. ಸತ್ಯ ಎಂದಾದರೂ ಹೊರಬರಲೇಬೇಕು. ಆದರೆ, ಹೊರತರಲು ನಾವು ಯತ್ನಿಸಿದರೆ ವಿರೋಧ ಫಲ ದೊರೆತೀತು. ಎಂತಲೇ ನಾನೇ ಅಲ್ಲಿಂದ ಹೊರಟು ಬಂದೆ."

ಆ ವ್ಯಕ್ತಿ ಮೌನವೊಡೆಯಲಿಲ್ಲ, ಯಾವುದೋ ಯೋಚನೆಯಲ್ಲಿ ತಲ್ಲೀನನಾದ. ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಾಗಿದ್ದರು. ಆತ ತಾನು

ಹೊದ್ದಿದ್ದ ಶಾಲಿನಿಂದ ಕಣ್ಣುಗಳನ್ನೊರಸಿಕೊಂಡು ನಿಟ್ಟುಸಿರಿಬಿಟ್ಟ. ಭಾರವಾದ ಎದೆಯಿಂದ ಮೆಲುನುಡಿಯಲ್ಲಿ ಮಾತು ಆರಂಭಿಸಿದ.

"ಹತ್ತು ವರ್ಷಗಳ ಅವಧಿಯಲ್ಲಿ ಈ ಜೀವನದಲ್ಲಿ ಒಂದು ಯುಗವೇ ಕಳೆದಿದೆ. ನನ್ನ ತಾಯಿ ನಮ್ಮನ್ನಗಲಿದು ಹೊರಟು ಹೋಗಿದ್ದಳು; ತಂದೆಯ ದಾರಿ ಹಿಡಿದಿದ್ದಳು. ಅವಳನ್ನು ನೋಡುವ ಭಾಗ್ಯ ಕೊನೆಗೂ ನನಗಿಲ್ಲವಾಯಿತು "

"ಅಣ್ಣ . . . . . ಅತ್ತಿಗೆ . . . . "

"ಅವರನ್ನೂ ನೋಡಿದೆ. ಆದರೆ, ಅವರು ಹಿಂದಿನಂತೆ ಇಂದೂ ಇರಲಿಲ್ಲ—ಇಲ್ಲ. ಹೆಣ್ಣನ್ನು ನಂಬಿದ ನನ್ನಲ್ಲಿ ವಿಚಿತ್ರ ಬದಲಾವಣೆಯಾಯಿತು. ಹೊನ್ನನ್ನು ನಂಬಿದ ಅಣ್ಣನಲ್ಲಿ ವಿಕೃತ ಮಾರ್ಪಾಟಾಗಿದೆ. ನಾನು ಊರು ಬಿಟ್ಟ ಬಳಿಕ ಅವರೆಲ್ಲ ಇದೇ ಊರಿಗೆ ಬಂದರು. ಮನೆ ಕೊಂಡುಕೊಂಡ–ನನ್ನ ಅಣ್ಣ, ವ್ಯಾಪಾರ ಆರಂಭಿಸಿಧ. ನಾನು ಹಿಡಿಯಲೆಳಸಿದ್ದ ದಾರಿ ತಾನು ಹಿಡಿದು ಸಂಪತ್ತನ್ನೂ ಆರೋಗ್ಯವನ್ನೂ ಕಳೆದುಕೊಂಡ."

"ಅಂದರೆ . . . . ."

"ಅತ್ತಿಗೆ ಅನಾರೋಗ್ಯಕ್ಕೆ ತುತ್ತಾದಳು. ಅದು ದೀರ್ಘಕಾಲದ ಬೇನೆಯಾಯಿತು. ಅಣ್ಣನ ಹಿಂದೆ ನಿಂತ ಅವನ ಶಿಷ್ಯರು ಅವನನ್ನು ಅಡ್ಡದಾರಿಗೆ ತಿರುಗಿಸಿದರು. ಯಾವುದೋ ಹೆಣ್ಣಿನ ಸೆರಗು ಹಿಡಿದು ಅವನೂ ಹೊರಟ. ಒಮ್ಮೆ ಜಾರಿದವನು ಮುಂದೆ ಹಜ್ಜೆ ಹಜ್ಜೆಗೂ ಹಿನ್ನಡೆಯುತ್ತಾನಂತೆ. ಅವನಿಗೆ ಹೆಣ್ಣುಗಳ ಬೇಟೆಯೇ ನಿತ್ಯಕಸಬಾಗಿ ಈಗ ವ್ಯಾಪಾರವೂ ನಿಂತಿದೆ. ಆಸ್ತಿಯೂ ಕರಗಿಹೋಗಿದೆ. ಆರೋಗ್ಯ ಉಡುಗಿ ಹೋಗಿದೆ."

"ನಿಮ್ಮ ಪಾಲಿನ ಆಸ್ತಿ . . . . "

"ಅದು ಅವನ ಪಾಲಿನದಾಗಿ ಯಾರ ಕೈಯನ್ನೋ ಸೇರಿದೆ. ಕಾಲಂತ ಜಮೀನು ಉಳಿದಿರಬಹುದೀಗ; ಕಾಲವಾಗುವ ವರೆಗೆ ಅದು ಬಂದರೆ ಸಾಕು. ನನ್ನ ಪಾಲು ನನಗೆ ಹಿಂದೆ ದೊರೆಯಲಿಲ್ಲ. ಮೂರು ಕಾಸೂ ಬರಲಿಲ್ಲ . . . . . . "

"ಅವರವರ ತಲೆಗೆ ಅವರವರ ಕೈ. ನಮಗೆ ನಾವೇ ದಿಕ್ಕು"

"ನಿಜ ತಮ್ಮ. ನಮಗೆ ನಾವೇ ದಿಕ್ಕು. ಚಿನ್ನದಂತಹ ಮಾತನ್ನಾಡಿದೆ

ಅನುಭವದ ರಸಪಾಕ ಈ ನುಡಿ"

"ಏನೋ ಆಡಿಬಿಟ್ಟೆ ...."

"ನಿನ್ನ ಮಾತು ನಿಜ. ಸಾವಿರ ಪಾಲಿಗೂ ನಿಜ. ಮೂರು ಕಾಸೂ ದೊರೆಯುಲಾರದು; ನಿನ್ನ ಜಮೀನು ಎಂದೋ ಹೊರಟುಹೋಗಿದೆ ಎಂದ ನನ್ನ ಅಣ್ಣ ಕೂಡ."

"ಅಷ್ಟು ಕಂಗಾಲಾದರೇ? ಹೆಂಡಿರು ಮಕ್ಕಳ ಗತಿ?"

"ಅಲ್ಪಸ್ವಲ್ಪ ಉಳಿದಿದೆ-ಆದರೂ ಅದು ಹೆಚ್ಚುಕಾಲ ಬರುವ ಭರವಸೆಯಿಲ್ಲ. ಹೆಂಡತಿಯಿದ್ದಾಳೆ, ವರುಷಗಟ್ಟಲೆ ನರಳಿದರೂ ಇನ್ನೂ ಅವನ ಬೆನ್ನು ಬಿಡಲಿಲ್ಲ. ಜತೆಗೆ ಒಬ್ಬಳೇ ಮಗಳು, ಪುಟ್ಟ ಹುಡುಗಿ. ಎಂಟೊಂಭತ್ತು ವರ್ಷಗಳಿರಬಹುದೇನೋ? ಅತ್ಯಂತ ವೈಭವದಲ್ಲಿ ಹುಟ್ಟಿ ಬೆಳೆದ ಅದು ಭಿಕಾರಿಯಾಗಿ ಬಾಳಬೇಗಾಗುತ್ತದೆ."

"ಮುಂದೆ ...... ತಾವು ......"

"ನಾನು ಕೊಟ್ಟುದನ್ನು ನಾನೇ ಪಡೆಯುಲಾರೆ. ಆದರೆ ಈ ದೇಶ ಬಹಳ ವಿಶಾಲವಾಗಿದೆ. ಮೂವತ್ತೈದು ಕೋಟಿ ಜನರಿದ್ದಾರೆ ಇಲ್ಲಿ. ಅವರಲ್ಲಿ ನಾನೂ ಒಬ್ಬ. ದೇಶ ಸಂಚಾರ .... ಅದರ ಅನುಭವವಿದೆ ನನಗೆ .... ಅದೇ ನನ್ನ ಉದ್ಯಮ."

ಆ ವ್ಯಕ್ತಿ ಎದ್ದು ನಿಂತ. ಕಿಟ್ಟು ಕೂಡಾ ಎದ್ದ. ವ್ಯಕ್ತಿ ಮೆಲ್ಲನೆ ಹೊರಟ. ಇಬ್ಬರೂ ಮುಂದೆ ಮಾತನಾಡದೇ ಶ್ಮಶಾನದಿಂದ ಹೊರನಡೆಯುತ್ತ ಬೀದಿ ತಲುಪಿದರು. ಮಾರ್ಗದಲ್ಲಿ ನಡೆಯುತ್ತಿದ್ದಂತೆ ಆ ವ್ಯಕ್ತಿ ಹೇಳಿದ:—

"ದೇವರು ನಿನಗೆ ಒಳಿತನ್ನು ಮಾಡಲಿ ತಮ್ಮ. ಎಲ್ಲಿಂದಲೋ ಹಾರಿ ಬಂದ ಹಕ್ಕಿಗಳೆರಡು ಯಾವುದೋ ಮರದ ರೆಂಬೆಯ ಮೇಲೆ ಕುಳಿತು ಪರಸ್ಪರ ತಮ್ಮ ದುಃಖತೋಡಿಕೊಂಡುವು. ಈಗ ಇನ್ನೆಲ್ಲೋ ಹಾರಿ ಹೋಗುತ್ತವೆ. ಎಂದಾದರೊಮ್ಮೆ ಪುನಃ ಭೇಟಿಯಾಗೋಣ. ನಿನ್ನ ಹೆಸರು ......"

"ಕಿಟ್ಟು. ತಾವು ಬೇಗನೇ ಹೊರಟುಬಿಡುತ್ತೀರಾ?"

"ಈ ಊರಿನಲ್ಲಿ ನಾನಿರಬೇಕಾದ ಅಗತ್ಯವಿಲ್ಲ ತಮ್ಮ. ಇರಬೇಕು ಎನ್ನುವವರು ಹಿಂದೆಯೇ ಹೊರಟುಹೋಗಿದ್ದಾರೆ. ತಾಯಿಯಿಲ್ಲದ ತವರು

ಇದು ನನಗೆ. ಆದರೆ . . . . . ನಿನ್ನಂತಹ ಆತ್ಮೀಯರು ಎಲ್ಲೆಲ್ಲೂ ದೊರೆಯುತ್ತಾರೆ; ಅವರೇ ನನ್ನ ಸರ್ವಸ್ವ."

"ತಮ್ಮ ಹೆಸರು . . . . . . ."

"ರಾಮರಾಯ" ಎಂದು ಮುಂದುವರಿಯುತ್ತಿದ್ದಂತೆ ಕಿಟ್ಟುವಿನ ಗುಡಿಸಲು ಹತ್ತಿರವಾಯಿತು.

"ಇಲ್ಲೇ ನಾನೀಗ ವಾಸಿಸುತಿದ್ದೇನೆ" ಎಂದು ಕಿಟ್ಟು ತನ್ನ ಗುಡಿಸಲನ್ನು ತೋರಿಸಿದ.

"ಆಗಲಿ ತಮ್ಮ. ನಿನಗೆ ಒಳ್ಳೆಯದಾಗಲಿ, ಎಂದಾದರೊಮ್ಮೆ ಎಲ್ಲಾದರೂ ಈ ಹಕ್ಕಿಗಳು ಪುನಃ ಸಂಧಿಸುವಂತಾಗಲಿ" ಎಂದು ಆತ ವೇಗವಾಗಿ ಹೊರಟುಹೋದ.

ಕಿಟ್ಟು ತನ್ನ ಗುಡಿಸಲಿನೆಡೆಗೆ ನಿಧಾನವಾಗಿ ನಡೆದುಹೋದ.

---

# ಒಂಭತ್ತು

ಸ್ವತಂತ್ರ ಉದ್ಯಮ ಆರಂಭಿಸಿದಂದಿನಿಂದ ಕಿಟ್ಟುವಿನ ಜೀವನ ಹೊಸ ದಾರಿಗೆ ತಿರುಗಿತು. ತನ್ನ ಜೀವನದ ಹೋರಾಟವೆಂದರೆ, ದುಡಿಮೆಯ ಕಾರ್ಯವೊಂದೇ ಅಲ್ಲ, ಬುದ್ಧಿಯ ಬೆಳವಣಿಗೆಯೂ ಆಗಿರಲೇಬೇಕೆಂದು ಅವನು ಬಗೆದ. ತೂಗಾಡುವ ಅಂಗಡಿ, ಅದನ್ನು ಹೊತ್ತು ಸುತ್ತಾಡಿ ವ್ಯಾಪಾರ ನಡೆಸಿ ಜೀವನ ನಿರ್ವಹಣಕ್ಕೆ ಬೇಕಾದ ಹಣ ಸಂಪಾದಿಸುವುದರ ಜತೆಗೆ ಕೈಗೆ ದೊರೆತ ಪತ್ರಿಕೆ, ಪುಸ್ತಕಗಳನ್ನೋದುವುದನ್ನೂ ತನ್ನ ಕರ್ತವ್ಯವಾಗಿ ಮಾಡಿಕೊಂಡ. ತನ್ನ ನಿತ್ಯದ ವ್ಯಾಪಾರೀ ಜೀವನದಲ್ಲಿ ಯಾರ ಪರಿಚಯವಾದರೂ ಅವರಿಂದ ಒಂದೆರಡು ಕತೆಪುಸ್ತಕಗಳನ್ನಾದರೂ ಪಡೆದು ಓದುವುದು ಅವನಿಗೆ ಅಭ್ಯಾಸವಾಯಿತು. ಓದಬೇಕು, ವಿಚಾರ ತಿಳಿಯಬೇಕು. ತಾನೂ ಒಬ್ಬ ಬುದ್ಧಿಜೀವಿಯಾಗಬೇಕು–ಎಂಬ ಕನಸು ಅವನನ್ನು ಹಗಲಿರುಳು ಪೀಡಿಸುತ್ತಿತ್ತು.

ಆದರೆ . . . . . . ಅವನ ವಿದ್ಯೆಯಲ್ಲಿನ ಕೊರತೆ ಮಾತ್ರ ಅವನ

ಮನವನ್ನು ಸದಾ ಕೊರೆಯುತ್ತಿತ್ತು. ಇಂಗ್ಲಿಷ್ ಭಾಷೆ ತಿಳಿಯದ ಮಂಕ ತಾನು ಎಂದು ಅವನು ದುಃಖಿಸುತ್ತಿದ್ದ. ಅವನ ದುಃಖ ಚಿಂತೆಗಳು ಅವನನ್ನು ನಿರಾಶಾವಾದಿಯಾಗಿ ಮಾಡಲಿಲ್ಲ; ಆಶಾವಾದಿಯಾಗಿ ಮಾಡಿದುವು. ಅಂಗಡಿ ಅವನ ಕೊರಳಿಗೆ ಗಂಟುಬಿದ್ದಂತೆ ಇಂಗ್ಲಿಷ್ ಓದುವ ಹುಚ್ಚೂ ಗಂಟುಬಿತ್ತು. ಎ. ಬಿ. ಸಿ. ಡಿ. ಕಲಿತಾಯಿತು. ಮೊದಲನೆಯ ಪುಸ್ತಕವಾಯಿತು. ಎರಡನೆಯದೂ ಆಯಿತು.

ವಿದ್ಯಾರ್ಥಿಗಳ ಪರಿಚಯ ಮಾಡಿಕೊಂಡು, ಅವರ ಸಹಾಯದಿಂದ ತನ್ನ ಓದು ಮುಂದುವರಿಸಿದ. ಇಂಗ್ಲೀಷು ಈ ಜನ್ಮದಲ್ಲಿ ತನಗೆ ಬರಲಾರದೆಂದು ಅಕ್ಷರಮಾಲೆ ಕಲಿಯುತ್ತಿದ್ದಾಗ ತಿಳಿದಿದ್ದ ಕಿಟ್ಟು, ಈಗ ಆಶಾವಾದಿಯಾದ. ದಿನೇ ದಿನೇ ಅವನ ಧೈರ್ಯ ಬೆಳೆಯಿತು. ಇಂಗ್ಲಿಷ್ ಭಾಷೆ ಕೈಗೆಟಕಿತು, ತಾನು ತನ್ನ ಅದೃಷ್ಟವನ್ನು ಬದಲಾಯಿಸಿಕೊಂಡೆ ಎಂದು ನಲಿದ. ಊಟ, ವಿಶ್ರಾಂತಿ, ನಿದ್ರೆ ಯಾವುದನ್ನೂ ಪರಿಗಣಿಸದೆ ಕಿಟ್ಟು ಒಂದೇ ಸವನೆ ಇಂಗ್ಲೀಷ್ ಅಭ್ಯಾಸ ಮಾಡಿದ. ಅವನ ಸಾಹಸ, ಹಟ, ಬುದ್ಧಿಶಕ್ತಿಗಳನ್ನು ಕಂಡು ಅವನಿಗೆ ಸಹಾಯ ನೀಡುತ್ತಿದ್ದ ಇತರ ವಿದ್ಯಾರ್ಥಿಗಳಿಗೂ ಆಶ್ಚರ್ಯವಾಯಿತು. ಆ ಗೆಳೆಯರ, ಜತೆಗೆ ನಿಂತು ಅವನ ಮುಖ್ಯ ಗುರುವಾಗಿದ್ದ ಬಾಸೆಲ್ ಮಿಷನ್‌ನವರ ಇಂಗ್ಲಿಷ್ ಮೂಲಪಾಠಕ ಮತ್ತು ಇಂಗ್ಲೀಷ್ ಕನ್ನಡ ಶಬ್ದಕೋಶಗಳಿಗೆ ಮಾತ್ರ ಆಶ್ಚರ್ಯವಾಗಿರಲಾರದು. ಎ. ಬಿ. ಸಿ. ಡಿ. ಕೂಡಾ ತಿಳಿಯದ ಬೀಡಿಬೀಡಾ ಮಾರಾಟಮಾಡುವ ಹುಡುಗ ಆರು ತಿಂಗಳಲ್ಲಿ ಇಂಗ್ಲೀಷ್ ಮೂರನೇ ಪುಸ್ತಕ ಓದುತ್ತಿದ್ದ. ಮಳೆಗಾಲದ ತಡೆಯಿಲ್ಲದ ಮಳೆ ಅವನಿಗೆ ತುಂಬ ಸಹಕಾರಿಯಾಯಿತು; ಅವನ ಅಭ್ಯಾಸಕ್ಕೆ ಸಾಕಷ್ಟು ಅವಕಾಶ ಕಲ್ಪಿಸಿಕೊಟ್ಟಿತು.

ತೂಗಾಡುವ ಅಂಗಡಿಯ ವಿವಿಧ ಸಾಮಾಗ್ರಿಗಳ ಜತೆಗೆ ಪುಸ್ತಕವೂ ತೂಗಾಡಿ ಸಂಚರಿಸುತ್ತಿತ್ತು. ಮೈದಾನಿಗೆ ಬೇಗನೇ ಬಂದು, ಗಿರಾಕಿಗಳ ದಾರಿ ಕಾಯಬೇಕಾದಾಗಲೆಲ್ಲ ಕಿಟ್ಟು ಒಂದು ಮೂಲೆಯಲ್ಲಿ ಕುಳಿತು ಪುಸ್ತಕ ಓದಲು ಆರಂಭಿಸುತ್ತಿದ್ದ. ಜನ ತುಂಬುತ್ತಿದ್ದಂತೆ ಒಮ್ಮೆ ಅವರಿದ್ದೆಡೆ ಸರಿದು, ಬೀಡೀ ಬೀಡಾ ಸಿಗರೇಟ್ ಎಂದು ಕೂಗಾಡಿ ಪುನಃ ಹೊಸ ಗಿರಾಕಿಗಳು ಮೈದಾನು ಪ್ರವೇಶಿಸುವವರೆಗೆ ಓದು. ಬಿಸಿಲು ಹೆಚ್ಚಾಗಿ ಜನ ಸಂದಣಿ ಇಲ್ಲವಾದರೂ, ಮಳೆ ಬಂದು ಮರೆಯಲ್ಲಿ ನಿಲ್ಲಬೇಕಾಗಿ ಬಂದಾ

ಗಲೂ ಕಿಟ್ಟು ಓದಿನ ಕಡೆಗೆ ಗಮನ ಹರಿಯಿಸುತ್ತಿದ್ದ. ಓದುವ ಹುಚ್ಚು ದಿನೇ ದಿನೇ ಬಲವಾಗಿ ಅವನನ್ನು ಹೊಂದಿಕೊಂಡಿತ್ತು.

ಆ ದಿನ ಮೈದಾನಿನ ಮೂಲೆಯ ಚರ್ಚ್‌ಬಳಿ ಮರದಡಿ ಕುಳಿತು ಓದುತ್ತಿದ್ದ. ಅವನ ತೂಗಾಡುವ ಅಂಗಡಿ ಬಳಿಯಲ್ಲಿಯೇ ನೆಲದ ಮೇಲೆ ಇತ್ತು. ಬಿಸಿಲಿನ್ನೂ ಆರಿರಲಿಲ್ಲವಾಗಿ ಮೈದಾನಿನ ಕಡೆಗೆ ಯಾರೂ ಸುಳಿದಿರಲಿಲ್ಲ. ಅಲ್ಲಲ್ಲಿ ಕೆಲಕೆಲವರು ಮೈದಾನನ್ನು ಹಾದು ನಡೆದು ಹೋಗುತ್ತಿದ್ದರು. ಕಿಟ್ಟು ಓದಿನಲ್ಲೇ ಮೈಮರೆತಂತಿತ್ತು. ಮನಸಿನಲ್ಲೇ ಮೆಲುಕು ಹಾಕುತ್ತಿದ್ದ ಶಬ್ದಗಳು ಅವನಿಗೇ ಅರಿಯದಂತೆ ಒಮ್ಮೊಮ್ಮೆ ಹೊರಸಿಡಿಯುತ್ತಿದ್ದುವು. ಅದು ತಿಳಿದು ಬಂದೊಡನೆ ತನ್ನಲ್ಲೇ ನಾಚಿಕೆಗೊಂಡು ಕಿಟ್ಟು ಮನಸಿನಲ್ಲೇ ಓದಲು ಆರಂಭಿಸುತ್ತಿದ್ದ.

Wher wealth accumulatus, and men decay·
Princes and lords may flowiish or may fade:

ಮೌನದ ಕಟ್ಟೊಡೆದು ಈ ಹಾಡು ಹೊರಬಂತು. ಪಕ್ಕನೆ ಎಚ್ಚರವಾಗಿ ಕಿಟ್ಟು ನಾಚುಗೆಯಿಂದ ಅತ್ತಿತ್ತ ನೋಡಿದ. ಅವನ ಮುಂದೆ ಯಾರೋ ನಿಂತಿದ್ದರು.

ನಲ್ವತ್ತು ವರ್ಷ ದಾಟಿರಬಹುದಾದ ತೆಳ್ಳಗಿನ ದೇಹ. ಒಂದು ಪಂಚೆ, ಶರ್ಟು, ಕೋಟು, ತಲೆಯ ಮೇಲೊಂದು ಟೊಪ್ಪಿಗೆ. ಕೊಡೆಯನ್ನು ಬಿಡಿಸಿ ಹಿಡಿದುಕೊಂಡಿದ್ದಾರೆ. ಕಂಕುಳಲ್ಲಿ ಒಂದೆರಡು ಪುಸ್ತಕಗಳು. ಕನ್ನಡಕ ಬೇರೆ. ಬೀಡಿ-ಬೀಡಾ ತುಂಬಿದ ಹಲಿಗೆ, ಅದರ ಬಳಿ ಓದುವ ಹುಡುಗ. ಇದನ್ನು ಕಂಡು ಆ ದಾರಿಯಾಗಿ ಹೋಗುತ್ತಿದ್ದವರು ಕುತೂಹಲಿಯಾಗಿ ಅತ್ತಬಂದರು. ಅವರು ಪ್ರತಿದಿನ ಮೈದಾನನ್ನು ಹಾದು ಹೋಗುವಾಗ ನೋಡುತ್ತಿದ್ದ ವ್ಯಕ್ತಿಯೇ. ತಾನು ಹತ್ತಿರ ಬಂದುದನ್ನು ಪರಿಗಣಿಸದೆ ಆತ ಓದುತ್ತಿದ್ದುದನ್ನು ಕಂಡು ಅವರ ಕುತೂಹಲ ಬೆಳೆಯಿತು ಎಂತಲೇ ಹಾಗೇ ನಿಂತುಕೊಂಡರು. ಅವರನ್ನು ನೋಡಿದ ಕಿಟ್ಟುವಿನ ಮುಖ ನಾಚುಗೆಯಿಂದ ಕೆಂಪಾಯಿತು. ಆತ ತಲೆ ತಗ್ಗಿಸಿದ.

"ನಿಜ! ಮಗು. ಧನಿಕರ ಸಂಖ್ಯೆ ಬೆಳೆದಂತೆ, ಧನಿಕನಲ್ಲಿ ಧನ ಹೆಚ್ಚಿದಂತೆ ಮಾನವ ಪಶುವಾಗಿ ಬಾಳಬೇಕಾಗುತ್ತದೆ. ಮುಂದೆ ಓದು . . . . . ಆದರೆ, ದೇಶದ ಅಭಿಮಾನಧನವಾದ ಸಶಕ್ತ ರೈತವರ್ಗ ಒಮ್ಮೆ ಅಳಿದರೆ

ಮುಂದೆ ಹುಟ್ಟಲಾರದು . . . . . . ಎಂದಿದ್ದಾನೆ, ಗೋಲ್‌ಸ್ಮಿತ್ ಮಹಾ ಕವಿ ತನ್ನ 'ಹಾಳೂರು' ಎಂಬ ಕವಿತೆಯಲ್ಲಿ."

ಕಿಟ್ಟುವನ್ನು ವಿಚಾರಿಸಬೇಕೆಂದು ಬಂದಿದ್ದ ಆ ಉಪಾಧ್ಯಾಯರೇ ಕರ್ತವ್ಯ ಮರೆತು ಮಹಾಕವಿಯ ಕವಿತೆಯ ಬಗೆಗೆ ಮಾತನಾಡಿದರು. ಆಡಿದ ಬಳಿಕ ತಾನು ಪಾಠ ಆರಂಭಿಸಿದುದು ಸರಿಯಲ್ಲ ಎಂದು ಅವರಿಗೂ ತಿಳಿಯಿತು. ಅವರ ಮಾತುಗಳನ್ನು ಕೇಳಿ ಕಿಟ್ಟುವಂತೂ ಮೂಕನಾಗಿ ಕುಳಿತಿದ್ದ.

"ನೀನು ಶಾಲೆಗೂ ಹೋಗುತ್ತಿರುವೆಯೇನು?"

"ಇಲ್ಲ ಸಾರ್"

"ಅಂದರೆ . . . . . . "

"ಐದನೇ ಕ್ಲಾಸ್ ಓದಿ, ಮುಂದುವರಿಸಲಾಗದೆ ಈ ವ್ಯಾಪಾರ ಆರಂಭಿಸಿದೆ. ಮನೆಯಲ್ಲೇ ಬಿಡುವಾದಾಗ ಕುಳಿತು ಇಂಗ್ಲೀಷ್ ಕಲಿಯು ತ್ತಿದ್ದೇನೆ . . . . ."

ಕಿಟ್ಟು ತನ್ನ ಕತೆಯನ್ನೆಲ್ಲ ತಿಳಿಸಿದ. ಮಾಸ್ತರರಿಗೆ ವಿಚಾರ ತಿಳಿದು ದುಃಖವಾದಂತೆ, ಅವನ ಸಾಹಸದ ಓದಿನ ಬಗೆಗೆ ಅಭಿಮಾನ ಮೂಡಿತು. ಇಂಥ ವಿದ್ಯಾರ್ಥಿಗಳಿಗೆ ವಿದ್ಯೆ ದೊರೆಯದಾದರೆ, ಶಾಲೆಗಳಿದ್ದೂ ಪ್ರಯೋ ಜನವಿಲ್ಲ ಎಂದುಕೊಂಡರು ತಮ್ಮ ಮನದಲ್ಲೆ.

"ನಿನ್ನ ಇಂಗ್ಲೀಷ್ ಮೂರನೇ ಫಾರ್ಮಿಗೂ ಸಾಕಾಗುತ್ತೆ. ನನ್ನಿಂ ದಾದ ಎಲ್ಲ ಬಗೆಯ ಸಹಾಯ ನೀಡುತ್ತೇನೆ. ನೀನು ಮುಂದಿನ ಜೂನ್‌ನಲ್ಲಿ ಸ್ಕೂಲಿಗೆ ಸೇರಲೇಬೇಕು."

ಕಿಟ್ಟು ಮುಂದೆ ಮಾತನಾಡಬೇಕೆಂದು ಆರಂಭಿಸಿದಾಗಲೇ ಮಾಸ್ತ ರರು ಅವನಿಗೆ ಆರ್ಥಿಕವಾದ ಭರವಸೆಯನ್ನು ಕೊಟ್ಟರು.

"ಸಂಬಳದ ಬಗೆಗೆ ಹೆದರಬೇಡ. ನನ್ನ ಮನೆ ಡೊಂಗರಕೇರಿಯಲ್ಲಿದೆ; ವಕೀಲ್ ಆಚಾರ್ಯರ ಮನೆಯ ಹಿಂದೆ. ಸಮಯವಿದ್ದಾಗ ಬಂದು ಪಾಠಹೇಳಿಸಿಕೊ. ಪಠ್ಯಪುಸ್ತಕಗಳನ್ನು ನಾಳೆ ಸಂಜೆ ಕೊಡುತ್ತೇನೆ."

"ಗುರುವನ್ನರಸಿ ಹೋಗಿ, ಅವರ ಆಶೀರ್ವಚನ ದೊರೆಯದೆ ಬಂದ ವರು ಬಹಳ ಮಂದಿ; ದೊರಕಿಸಿಕೊಂಡವರೂ ತುಂಬ. ಆದರೆ, ಗುರುವೇ ಶಿಷ್ಯನನ್ನು ಹುಡುಕಿ ಬಂದರು. ಇದೇ ನನ್ನ ಬಾಳಿನ ಉದಯ" ಎಂದು

ಕಿಟ್ಟು ಉಬ್ಬಿದ. ಅವರ ಮಾತುಗಳಿಗೆ ಒಪ್ಪಿ ಮನಸಾರೆ ವಂದಿಸಿದ.

"ಆಗಲಿ ಸಾರ್. ತಮ್ಮ ಆಶೀರ್ವಾದಬಲದಿಂದ ಮುನ್ನಡೆಯುತ್ತೇನೆ. ಈ ಬಡವನನ್ನು ಮರೆಯಬೇಡಿ".

"ಬಡತನ ಎಲ್ಲಿದೆ ಮಗೂ? ಆರ್ಥಿಕವಾದ ಬಡತನ ಬಡತನವಾದರೆ ಅದನ್ನು ನೀಗಿಕೊಳ್ಳುವುದು ಸುಲಭ. ನೈತಿಕ, ಹಾರ್ದಿಕ, ಸಾಂಸ್ಕೃತಿಕ ಬಡತನ ಬರಬಾರದು. ಇವು ಒಳಗಿನ ವೈರಿಗಳು. ಆರ್ಥಿಕ ಬಡತನ ಹೊರಗಿನ ವೈರಿ, ಅದರ ದಾತೃಗಳು ಪರೋಪಜೀವಿಗಳು. ಅದನ್ನು ಆತ್ಮ ಶಕ್ತಿಯ ವ್ಯಕ್ತಿ ಹೋರಾಡಿ ನೀಗಬಲ್ಲ. ನಿನಗೆ ಒಳಗಿನ ವೈರಿಗಳು ಇಲ್ಲ; ಅವರನ್ನು ಬರಗೊಡಬೇಡ."

ಮಾಸ್ತರರು ತಮ್ಮ ಮನೆಯೆಡೆ ನಡೆದರು. ಕಿಟ್ಟು ಅಂಗಡಿಯನ್ನು ಹೊತ್ತುಕೊಂಡು ವ್ಯಾಪಾರಕ್ಕೆ ಹೊರಟ.

ಮೈದಾನು ಬರಿದಾಯಿತು; ಕಾಗೆಗಳೆಲ್ಲ ಗೂಡು ಸೇರಿದುವು; ಕಿಟ್ಟು ಬೊಕ್ಕಪಟ್ಣದ ದಾರಿ ಹಿಡಿದ. ಅವನ ಮನಸ್ಸು ಹರ್ಷದಿಂದ ಹಗುರವಾಗಿತ್ತು; ದೇವರನ್ನು ಕಂಡ ತವಸಿಯಂತೆ ಹಿಗ್ಗಿತ್ತು.

ಒಂದು ವರ್ಷದ ಜೀವನ ದುಡಿತದಿಂದ ಕಳೆದು ಹೋಗಿತ್ತು. ಇನ್ನು ನಾಲ್ಕೈದು ತಿಂಗಳು ದುಡಿದು, ಓದಿ ಸಿದ್ಧವಾದರೆ ಕಳೆದ ಎರಡು ವರ್ಷಗಳ ನಷ್ಟವನ್ನೂ ತುಂಬ ಬಹುದೆಂಬ ಬಗೆಗೆ ಕಿಟ್ಟುವಿಗೆ ಧೈರ್ಯ ಉಂಟಾಯಿತು. ತಾನಾಗಿ ಉಪಾಧ್ಯಾಯರೇ ಬಂದು ಸಕಲ ಸಹಾಯ ನೀಡಿದ್ದಾರೆ. ತಾನು ತನ್ನ ಹೋರಾಟದಲ್ಲಿ ಎದೆಗೆಡದೆ ಮುನ್ನಡೆದರೆ ಎಲ್ಲ ಎಡರೂ ತನಗೆ ಸಹಕಾರಿಯಾಗುತ್ತೆ ಎಂಬದು ಸತ್ಯ. ತಾನು ಮುನ್ನಡೆಯಬೇಕು; ಪ್ರಕೃತಿ ಸಹಜ ಎಲ್ಲ ಅಡ್ಡಿಗಳನ್ನು ಇದಿರಿಸಬೇಕು. ಹಿನ್ನಡೆಯಲು ನಿರಾಕರಿಸುವವನು ಮುನ್ನಡೆಯುತ್ತಾನೆ. ಮುನ್ನಡೆಯಲಾರದವನು ಹಿನ್ನಡೆಯುತ್ತಾನೆ. ಎಂದು ಯೋಚಿಸುತ್ತ ಕಿಟ್ಟು ಮನೆಸೇರಿದ.

ಅವನ ಧೈರ್ಯ ಹೆಚ್ಚಿತು, ಓದು ಅಧಿಕವಾಯಿತು. ಉಪಾಧ್ಯಾಯರು ಎಲ್ಲ ಬಗೆಯಿಂದಲೂ ಅವನಿಗೆ ಸಹಾಯ ಮಾಡಿದರು. ಅವನ ಇಂಗ್ಲೀಷ್ ಭಾಷಾಜ್ಞಾನ ಹೆಚ್ಚಿತು. ಇತಿಹಾಸ, ಭೂಗೋಳಶಾಸ್ತ್ರ, ವಿಜ್ಞಾನ ಗಣಿತಗಳನ್ನೆಲ್ಲವನ್ನೂ ಅಭ್ಯಾಸಿಸಿ ಎರಡು ವರ್ಷಕಾಲ ಶಾಲೆಯಲ್ಲಿ ಕಲಿತು ಮುಗಿಸಬಹುದಾದುದನ್ನು ಮನೆಯಲ್ಲೇ ಪೂರೈಸಿದ.

ಅವನ ಪ್ರಗತಿಯನ್ನು ಕಂಡು ಉಪಾಧ್ಯಾಯರೂ ಹಿಗ್ಗಿದರು. ತಾನು ಬೀದಿಯ ಕೈಕಂಬದ ಕೆಲಸ ಮಾಡಿದರೂ, ಈ ವಿದ್ಯಾರ್ಥಿ ತೋರಿದ ಪ್ರಗತಿ ಅವರ ಹೃದಯವನ್ನೇ ಸೂರೆಗೊಂಡಿತು. ಕಿಟ್ಟುವಿನ ನಯ, ವಿನಯ, ವಿಧೇಯತೆಗಳೂ ಅವರನ್ನು ಬಲವಾಗಿ ಬಂಧಿಸಿದುವು.

"ಕನ್ನಡವೂ ಚೆನ್ನಾಗಿ ತಿಳಿದಿದೆ . . . . "

"ತಾಯ್ನುಡಿ ಅದು ಸಾರ್. ನನ್ನ ತಾತನೇ ನನ್ನ ಗುರುಗಳು. ಜೈಮಿನಿ, ರಾಮಾಯಣಗಳು ನನಗೆ ಕನ್ನಡದ ಸವಿಯುಣಿಸಿದುವು."

"ನೀ ಬರೆದ ಪ್ರಬಂಧಗಳು ಚೆನ್ನಾಗಿವೆ. ಮನಸ್ಸಿಗೆ ಹೊಳೆದ ವಿಚಾರ ಗಳ ಮೇಲೆ ಬರೆ. ಕತೆ, ಕವನ ಪ್ರಬಂಧ–ಏನೇ ಆಗಿರಲಿ! ನಾನು ತಿದ್ದಿ ಕೊಡುತ್ತೇನೆ "

"ಆಗಲಿ ಸಾರ್"

"ನಡೆಯುತ್ತೇನೆ; ದಾರಿ ತೋರಿಸಿ, ಎನ್ನುವವನಿಗೆ ದಾರಿ ತೋರಲಾರ ದವರು ಬದುಕಿ ಪ್ರಯೋಜನವಿಲ್ಲ. ನನ್ನಿಂದ ಸಾಧ್ಯವಾದೆಲ್ಲ ಸಹಕಾರ ನೀಡುತ್ತೇನೆ."

ಕಿಟ್ಟು ಕನ್ನಡದಲ್ಲಿ ಏನೇ ಬರೆಯಲಿ, ಅದೆಲ್ಲವನ್ನೂ ಆದರದಿಂದ ನೋಡಿ, ಓದಿ, ತಿದ್ದಿ, ಮಾಸ್ತರರು ಅವನನ್ನು ಹುರಿದುಂಬಿಸುತ್ತಿದ್ದರು. ಅವನು ಬರೆದ ವಿಷಯಗಳ ಬಗೆಗೆ ಚರ್ಚಿಸಿ ಸರಿಯಾದ ಮಾರ್ಗ ಸೂಚಿ ಸುತ್ತಿದ್ದರು. ತಿದ್ದಿದವುಗಳು ಅವನು ನೋಡಿದ ಬಳಿಕ, ಪುನಃ ಮಾಸ್ತರರ ಬಳಿಗೇ ಬರುತ್ತಿದ್ದುವು. "ಅವೆಲ್ಲ ನನ್ನ ಬಳಿ ಇರಲಿ. ಇತರ ವಿದ್ಯಾರ್ಥಿ ಗಳಿಗೆ ತೋರಿಸಲು ಬೇಕಾಗಿವೆ" ಎಂದು ಕಿಟ್ಟುವನ್ನು ಸಮಾಧಾನ ಪಡಿಸು ತ್ತಿದ್ದರು.

ಮಾಸ್ತರರ ಬಳಿ ತೆರಳಿದ ಕಿಟ್ಟುವಿನ ಸಾಹಿತ್ಯ ಕೃತಿಗಳು ಒಂದೊಂ ದಾಗಿ ಪತ್ರಿಕೆಗಳಲ್ಲಿ ಕಾಣಿಸಿಕೊಂಡುವು. ಅವನಿಗೆ ತಿಳಿಯದಂತೆ ಅವುಗಳ ಲೇಖನದ ಹೆಸರನ್ನೂ ಅವರು ಬದಲಾಯಿಸಿದರು. ಅಂತೂ, ತನಗರಿಯ ದಂತೆ ಕಿಟ್ಟು ಸಾಹಿತಿಯಾಗುತ್ತಲಿದ್ದ.

ಮುಂದಿನ ಜೂನ್ ತಿಂಗಳಲ್ಲಿ ಕಿಟ್ಟು ಶಾಲೆ ಸೇರಿದ. ಮೂರನೇ ಫಾರ್ಮಿಗೆ ಸೇರುವುದು ಅವನಿಗೆ ಸುಲಭವಾಯಿತು. ಉಪಾಧ್ಯಾಯರೇ ಅವನನ್ನು ಕರೆದೊಯ್ದು, ಹೆಡ್ಮಾಸ್ತರರಿಗೆ ಪರಿಚಯ ಮಾಡಿಸಿದರು. ಮನೆ

ಯಲ್ಲೇ ಓದಿಕೊಂಡು ಬಂದವನಾದುದರಿಂದ ಅವನ ಪರೀಕ್ಷೆಯೂ ನಡೆಯಿತು. ಪರೀಕ್ಷೆಯಲ್ಲಿ ತೃಪ್ತಿಕರವಾಗಿ ಎಲ್ಲ ಪ್ರಶ್ನೆಗಳನ್ನೂ ಆತ ಉತ್ತರಿಸಿದ.

ಉಪಾಧ್ಯಾಯರೇ ಕಿಟ್ಟುವಿನ ರಕ್ಷಕರಾದರು. ಇತರ ಉಪಾಧ್ಯಾಯರುಗಳೂ ಅವನಿಗೆ ಬೇಕಾದ ಪುಸ್ತಕಗಳನ್ನು ಒದಗಿಸಿದರು. ವಿದ್ಯಾರ್ಥಿವೇತನವೂ ದೊರೆತು, ಅರ್ಧವೇತನ ಕೊಟ್ಟರೆ ಸಾಕೆಂದಾಯಿತು. ಈ ಉಳಿದರ್ಧದ ವ್ಯವಸ್ಥೆಯನ್ನು ಉಪಾಧ್ಯಾಯರು ಮಾಡಿಕೊಟ್ಟರು. ಊರಿನ ಒಬ್ಬಿಬ್ಬ ಡಾಕ್ಟರರೂ, ವಕೀಲರೂ, ಸಾಹುಕಾರರೂ ಹಾಗೂ ಇನ್ನೊಂದಿಬ್ಬರು ತಿಂಗಳಿಗೆ ಒಂದಿಷ್ಟು ಕೊಡುವ ವಾಗ್ದಾನ ಮಾಡಿದರು. ಕಿಟ್ಟುವಿಗೆ ಶಾಲಾ ಸಂಬಳ ತೆರುವುದಕ್ಕೆ ಸಹಾಯವಾಗಿ, ಜೀವನ ನಿರ್ವಹಣಕ್ಕೂ ವ್ಯವಸ್ಥೆಯಾದಂತಾಯಿತು. ಅರ್ಧ ಸಂಬಳ ತೆತ್ತ ಬಳಿಕವೂ ಎಂಟು–ಹತ್ತು ಉಳಿಯುತ್ತಿತ್ತು.

ಓದು, ಜತೆಗೆ ಮಳೆಗಾಲ, ಈ ನಡುವೆ ತನ್ನ ಅಂಗಡಿಯನ್ನು ಹೆಚ್ಚು ಹೊತ್ತು ಹೊತ್ತುಕೊಂಡು ವ್ಯಾಪಾರ ನಾಗಿಸುವುದು ಅವನಿಗೆ ಸಾಧ್ಯವಾರಲಿಲ್ಲ. ಆದರೂ, ಜೀವನದ ಮೂಲಾಧಾರವಾದ ತೂಗಾಡುವ ಅಂಗಡಿಯನ್ನು ಅವನು ಬಿಡಲಿಲ್ಲ. ನಿತ್ಯದ ಖರ್ಚನ್ನು ವ್ಯಾಪಾರದಿಂದ ಹುಟ್ಟಿಸಿಕೊಳ್ಳುತ್ತಿದ್ದ. ವ್ಯವಸ್ಥಿತವಾದ ಶಿಸ್ತಿನ ಜೀವನ, ತಾನು ತನ್ನ ಜೀವನವನ್ನು ಒಂದು ರೂಪಕ್ಕೆ ರೂಪಿಸಿಕೊಂಡು ರೂಢಿಸಿಕೊಳ್ಳಬೇಕೆಂಬ ಛಲ, ಕಾಫಿ, ಬೀಡಿ ಸಿಗರೇಟು ಮತ್ತಿತರ ಚಟಗಳಾವುವನ್ನೂ ತನ್ನ ಹತ್ತಿರವೂ ಬರಗೊಡಿಸಿಲ್ಲದ ಜೀವನ ನೀತಿಗಳಿಂದ ಕಿಟ್ಟು ವ್ಯಾಪಾರ ಕಡಿಮೆಯಾಗಿದ್ದರೂ ಹಣ ಮಿಗಿಸುವುದರಲ್ಲಿ ಶಕ್ತನಾದ. ವಿದ್ಯಾಭ್ಯಾಸಕ್ಕೆಂದು ದೊರೆತ ಸಹಾಯ ಧನದಲ್ಲಿ ಹೆಚ್ಚಾಗಿ ಉಳಿದುದನ್ನು ಹಾಗೇ ಕೂಡಿಡುತ್ತಿದ್ದ; ಮುಂದೆ ಬೇಕಾದಾಗ ಉಪಯೋಗಿಸಲೆಂದು.

ವಿದ್ಯಾರ್ಥಿಗಳು ಅವನನ್ನು ಗೇಲಿಮಾಡದಿರಲಿಲ್ಲ. ಆದರೆ, ಉಪಾಧ್ಯಾಯರೆಲ್ಲ ಅವನ ಬೆಂಬಲಕ್ಕಿದ್ದುದರಿಂದ, ಸ್ಕೂಲಿನಲ್ಲೂ ಯಾರ ತಂಟೆಗೂ ಹೋಗದೆ ತಾನು ತನ್ನ ಕೆಲಸದಲ್ಲೇ ಮಗ್ನನಾಗಿದ್ದುದರಿಂದ ಅವನನ್ನು ಹೆಚ್ಚಾಗಿ ಪೀಡಿಸುವುದೂ ಅವರಿಗೆ ಸಾಧ್ಯವಾಗಲಿಲ್ಲ ಲೇವಡಿ ಮಾಡಲೆಂದು ಬಂದವರೇ ಇವನ ವಿವೇಕಯುಕ್ತ ಮಾತುಗಳಿಗೆ ಸೋತು ಸ್ನೇಹಿತರಾಗು

ತ್ತಿದ್ದರು.

ಮೊದಲನೆಯ ಪರೀಕ್ಷೆ ಮುಗಿದು ಎರಡನೆಯ ಪರೀಕ್ಷೆಯೂ ಹತ್ತಿರವಾಯಿತು. ಕಿಟ್ಟು ಪರೀಕ್ಷೆಯಲ್ಲಿ ಮೊದಲ ವರ್ಗದಲ್ಲಿ ತೇರ್ಗಡೆಯಾಗಿದ್ದ. ಕನ್ನಡದಲ್ಲಂತೂ ಅವನೇ ಮೊದಲು. ಉಪಾಧ್ಯಾಯರುಗಳಿಗೂ ವಿದ್ಯಾರ್ಥಿಗಳಿಗೂ ಅವನ ಮೇಲಿದ್ದ ಅಭಿಮಾನ ಬೆಳೆಯಿತು. ಪಠ್ಯ ಪುಸ್ತಕಗಳ ಜತೆಗೆ ಇತರ ಪುಸ್ತಕಗಳನ್ನೂ ಆತ ಧಾರಾಳವಾಗಿ ಓದುತ್ತಿದ್ದ. ಕೈಗೆ ದೊರೆತ ಪತ್ರಿಕೆ, ಪುಸ್ತಕಗಳನ್ನೋದುವುದನ್ನು ಬಿಟ್ಟಿರಲಿಲ್ಲ ಅವನು.

ಹೊಸ ವರ್ಷ ಕಾಲಿಟ್ಟಿತು. ಕೆಲದಿನಗಳಲ್ಲಿ ತಾತ ತನ್ನ ಹಳೆಯ ಹಾಸಿಗೆ ಹೊತ್ತುಕೊಂಡು ಮಂಗಳೂರು ತಲುಪಿದರು. ಬಸ್ ಸ್ಟೇಷನ್‌ನಲ್ಲಿ ಕಾದಿದ್ದ ಕಿಟ್ಟು ಅವರನ್ನು ಮನೆಗೆ ಕರೆದೊಯ್ದ. ಹಾಸಿಗೆ ಪಾತ್ರೆ ಸಾಮುಗ್ರಿಗಳು ತುಂಬಿದ್ದ ಗೋಣಿಚೀಲ, ದೇವರು ಹಳೆ ಪುಸ್ತಕಗಳು ಮಡಿ ಇತ್ಯಾದಿ ಇದ್ದ ಮರದ ಪೆಟ್ಟಿಗೆ ಇವು ಕಿಟ್ಟುವಿನ ಮನೆ ಸೇರಿದುವು. ತುಂಬಿದ ಮನೆಯಿಂದ, ಹಳ್ಳಿಯ ಪ್ರಶಾಂತ ವಾತಾವರಣದಿಂದ ಹೊರಬಂದ ರಾಮಯ್ಯ ಪೇಟೆಯಲ್ಲಿ ಒಂಟಿಬಾಳು ಬಾಳಲು ಆರಂಭಿಸಿದರು. ಜತೆಗೆ, ಬೊಕ್ಕಪಟ್ಣದ ಮೀನಿನ ವಾಸನೆ ತುಂಬಿದ ಗಾಳಿ!

ಕೆಲದಿನಗಳಲ್ಲಿ ಅವರಿಗೂ ಈ ಜೀವನ ಒಗ್ಗಿತು. ನನಗೇನು? ಎಲ್ಲಾದರೊಂದು ಕಡೆ ರಾಮ–ರಾಮ–ಎಂದು ಕಾಲ ಕಳೆದರೆ ಸರಿ. ಹಲವರ ಹತ್ತಾರು ವಿಚಾರಗಳನ್ನು ಕೇಳಿ ಬೇಡವಾದ ವಾದಗಳಲ್ಲಿ ಆಸಕ್ತಿ ವಹಿಸಿ ಯಾಕೆ ತಲೆಕೆಡಿಸಿಕೊಳ್ಳಬೇಕು? ತಾನಾಯಿತು, ತನ್ನ ದೇವರ ಧ್ಯಾನವಾಯಿತು. ಭಾರತ–ರಾಮಾಯಣಗಳು ಇದ್ದೇ ಇವೆ ಎಂದುಕೊಂಡರು.

ಬೆಳಗ್ಗೆ ಅವರು ಏಳುವ ಮುನ್ನವೇ ಕಿಟ್ಟು ಎದ್ದು ಕಾಫಿ ಕಾಯಿಸುತ್ತಿದ್ದ. ಆದಾದ ಬಳಿಕ ಊಟದ ವ್ಯವಸ್ಥೆ. ಅನ್ನ ಬೇಯುತ್ತಿದ್ದಂತೆ ಮೊದಲು ತನಗೆ ಸಾಕಾದಷ್ಟು ಗಂಜಿ ಎತ್ತಿಕೊಂಡು, ಮಿಕ್ಕುಳಿದುದನ್ನು ಬಸಿಯುತ್ತಿದ್ದ. ಊಟದ ಹೊತ್ತಿಗೆ ತಾತನೇ ಒಂದು ಚಟ್ನಿಯನ್ನೋ ಸಾರನ್ನೋ ಮಾಡಿಕೊಳ್ಳುತ್ತಿದ್ದರು. ಸಂಜೆಯ ಅಡುಗೆಯನ್ನು ಅವರೇ ಸಿದ್ಧಗೊಳಿಸುತ್ತಿದ್ದರು. ಒಂದು ಅನ್ನಮಾಡಿಕೊಂಡರೆ ನಮ್ಮ ಅಡುಗೆಯಾಯಿತು. ಅಷ್ಟೂ ಮಾಡಲು ಸಾಧ್ಯವಿಲ್ಲವೆ ನನಗೆ. ನೀನು ನಿನ್ನ

ವಯಸ್ಸಿಗೆ ಹೆಚ್ಚಾಗಿ ದುಡಿಯುತ್ತೀಯಾ ಎಂದು ತಾತ ತನ್ನ ಪಾಲಿನ ಮನೆ ಗೆಲಸ ಮಾಡಿಕೊಳ್ಳುತ್ತಿದ್ದರು. ಬೆಳಗ್ಗೆ ಅನ್ನ ಬೇಯಿಸಿ ಇಟ್ಟು, ಗಂಜಿ ಉಂಡು ಹೊರಟರೆ ಕಿಟ್ಟು ಸಂಜೆ ಹಿಂತಿರುಗುತ್ತಿದ್ದ. ನಡುವೆ ಹಸಿವಾದರೆ ಒಂದೆರಡು ಹಣ್ಣು ಅವಲಕ್ಕಿ ಅವನ ತಿಂಡಿಯಾಗಿತ್ತು. ತಾತನಿಗೆ ಮೊಮ್ಮ ಗನ ಮನೆಯಲ್ಲಿ ತುಂಬ ಶಾಂತಿ ದೊರೆಯಿತು. ಪುರಾಣ ವಾಚನಕ್ಕೆ ಆಸ್ಪದ ಬಹಳವಾಯಿತು. ಇಬ್ಬರ ಈ ಸಂಸಾರ ಸುಗಮವಾಗಿ ಸಾಗಿತು. ಆ ವರ್ಷ ಕಿಟ್ಟು ಮೊದಲ ಸ್ಥಾನಗಳಿಸಿ ಉತ್ತೀರ್ಣನಾದ.

ಮಂಗಳೂರಿಗೆ ಬಂದ ಒಂದೆರಡು ತಿಂಗಳು ರಾಮಯ್ಯ ತನ್ನ ಮಗಳ ವಿಚಾರವನ್ನೇ ಎತ್ತಿರಲಿಲ್ಲ. ತನ್ನ ತಾಯಿಯ ಮಾತೆತ್ತಿದರೆ ತಾತನ ಮನ ಸ್ಸಿಗೆ ನೋವಾಗುತ್ತದೋ ಏನೋ ಎಂಬ ಭೀತಿಯಿಂದ ಕಿಟ್ಟು ಕೂಡಾ ಯಾವ ಮಾತೂ ಆಡಿರಲಿಲ್ಲ. ಎಷ್ಟೋ ಬಾರಿ ತನ್ನ ಮಗಳ ಬಗೆಗೆ ತಿಳಿಯ ಬೇಕೆಂದು ರಾಮಯ್ಯನಿಗೆ ಅನಿಸಿತ್ತು. ಅವಳ ಬಗೆಗೆ ಒಮ್ಮೆ ಜುಗುಪ್ಸೆ, ಕ್ರೋಧ; ಇನ್ನೊಮ್ಮೆ ಅನುತಾಪ, ಕರುಣೆ ಮೂಡಿ ಅವರ ಹೃದಯವನ್ನು ಕೊರೆಯುತ್ತಿತ್ತು. ಆದರೆ ಅವರ ನಿರ್ಧಾರ ಹೆಚ್ಚುಕಾಲ ನಿಲ್ಲಲಿಲ್ಲ. ಹೃದ ಯದಲ್ಲಿ ಕುದಿಯುತ್ತಿದ್ದ ಈ ಸಮಸ್ಯೆಯನ್ನು ಹುದುಗಿಸಿ ಇರಿಸಿದಷ್ಟಕ್ಕೂ ಅವರ ಅಶಾಂತಿ ಅಧಿಕವಾಗುತ್ತಿತ್ತು. ಅಂತೂ ಒಂದು ದಿನ ಮಾತನಾಡು ತ್ತಿದ್ದಂತೆ ವಿಚಾರವನ್ನೆತ್ತಿದರು.

“ಇಲ್ಲೇ ಬೆಂದೂರಿನಲ್ಲಿದ್ದಾಳೆ. ತಾನಿರುವ ಸ್ಥಳ ಹೇಳಬೇಡ, ಅವ ರಿಗೆ ಮುಖ ತೋರಿಸುವ ಧೈರ್ಯವೂ ತನಗಿಲ್ಲ ಎಂದು ಬೇಡಿಕೊಂಡಿದ್ದಾಳೆ ತಿಂಗಳುಗಟ್ಟಲೆ ತುಂಬಿಟ್ಟಿದ್ದ ಮಾತುಗಳು ಮಹಾಪೂರವಾಗಿ ಹರಿದುವು. ತಾಯಿಯನ್ನು ತಾನು ಕಂಡುದು, ಅವಳು ತನ್ನಲ್ಲಿ ತೋರಿದ ಅಮರ ಪ್ರೇಮ, ತನ್ನ ಉತ್ಕರ್ಷೆಗೆ ನೆರವಾದ ಬಗೆ ಎಲ್ಲವನ್ನೂ ವಿವರಿಸಿದ ಕಿಟ್ಟು.

“ಹೇಗಾದರೂ ಚೆನ್ನಾಗಿದ್ದರೆ ಸಾಕು. ಪತಿ-ಪತ್ನಿಯರು ಹೊಂದಿ ಕೊಂಡು ಬಾಳುನಡೆಸಿದರೆ ಅದೇ ಸ್ವರ್ಗ.”

“ಇಷ್ಟು ದಿನವಾದರೂ ಮಾಂಸ ಮಾತ್ರ ತಿನ್ನುತ್ತಿಲ್ಲ. ಅಂತೋಣಿ ಕೂಡಾ ಕುಡಿತವನ್ನು ಬಿಡುತ್ತಿದ್ದಾನೆ.”

“ಅದು ಅವಳ ಶಕ್ತಿಯ ಪ್ರತೀಕ. ಈಗಿನ ಮಗು?”

“ಚೆನ್ನಾಗಿದೆ. ತುಂಬ ಒಳ್ಳೇ ಗುಣ. ನಾನೆಂದರೆ ಮಮತೆ.

"ರಕ್ತದ ಗುಣ."

"ನನಗೆ ಬೆಳಕು ತೋರಿ ದಾರಿ ನಡೆಸಿ ನಿಂತ ಬೀದಿಯ ದೀಪ, ತಾತ"

"ನೀನೂ, ಹಾಗೇ ಆಗಲಿ . . . . ನನಗೂ ಅವಳ ಬಗೆಗೆ ತುಂಬ ಕಳವಳವಿತ್ತು; ರೋಷವೂ ಇತ್ತು. ಆದರೆ, ಒಮ್ಮೊಮ್ಮೆ ಯೋಚನೆ ಮಾಡಿದರೆ ಅವಳು ಹಿಡಿದ ದಾರಿಯೇ ಸರಿ ಎನಿಸುತ್ತದೆ ಮಗು. ಹೆರವರ ಕೂಳಿಗೆ ಅವಳು ಕೈನೀಡಬೇಕಾಗಿತ್ತು. ಪ್ರಾಯದ ಹೆಣ್ಣು . . . . ಎಂದು ಊರವರು ಅವಳು ತಪ್ಪು ದಾರಿ ಹಿಡಿಯದಿದ್ದರೂ ಸಾವಿರ ಆಪಾದನೆ ಹೊರಿಸುತ್ತಿದ್ದರು. ವ್ಯಭಿಚಾರ ಮಾಡದಿದ್ದರೂ ಸಮಾಜ ಅವಳನ್ನು ಸೂಳೆಯೆಂದು ಕರೆಯುತ್ತಿತ್ತು. ಇಂದು ಅವಳು ಮಾನವಂತೆಯಾಗಿ ಬಾಳಿದ್ದಾಳೆ; ಅವಳು ಮಾಡಿರುವಷ್ಟನ್ನೇ ಜನ ಆಡುತ್ತಾರೆ. ಒಮ್ಮೆ ಗುಲ್ಲೆಬ್ಬಿಸಿದ ಜನ ಈಗ ತಣ್ಣಗಾಗಿದ್ದಾರೆ."

"ಐದು ಮಂದಿಯ ಪತ್ನಿ ದ್ರೌಪದಿ, ತನ್ನ ಗಂಡ ಅಳಿದೊಡನೆ ಮೈದುನನ ಮನೆಸೇರಿದ ತಾರಾ, ಇವರೆಲ್ಲ ನಮ್ಮ ದೃಷ್ಟಿಯಲ್ಲಿ ಪತಿವ್ರತೆಯರು. ಆದರೆ . . . . ಇನ್ನೂ ವಿಧವೆಗೆ ವಿವಾಹವಾಗುವ ಅಧಿಕಾರವೂ ಇಲ್ಲ."

"ಕಾಲಧರ್ಮ ಮಗು"

"ಏನೋ? ನನಗೊಂದೂ ಅರ್ಥವಾಗುವುದಿಲ್ಲ"

"ಎಂದಾದರೊಮ್ಮೆ ನನ್ನ ಬಾಗಿಯನ್ನು ದೂರದಿಂದಲಾದರೂ ನೋಡಬೇಕು . . . . "

ದಿನಕಳೆದಂತೆ ತನ್ನ ಮಗಳ ಅಪರಾಧಗಳನ್ನು ರಾಮಯ್ಯ ಮರೆಯುತ್ತ ಬಂದರು. ಅವಳನ್ನೊಮ್ಮೆ ನೋಡಬೇಕೆಂಬ ಹಂಬಲ ಅವರಲ್ಲಿ ಬೆಳೆಯುತ್ತ ಬಂತು. ಆದರೆ . . . . . . ಕಿಟ್ಟು ಮಾತ್ರ ಆ ದಿನವನ್ನು ಮುಂದಕ್ಕೆ ದೂಡುತ್ತಲೇ ಇದ್ದ. ತಾತನನ್ನು ಕಂಡು ತಾಯಿ ಸಿಟ್ಟಾದರೆ? ತಾನೂ ಮುಂದೆ ಅವಳನ್ನು ನೋಡುವಂತಿಲ್ಲ. ಆಕೆ ಈ ಊರನ್ನೇ ಬಿಟ್ಟು ಹೊರಟು ಹೋದರೆ . . . . ಎಂಬ ಭೀತಿ ಅವನಿಗೆ.

ಕ್ರಿಸ್‌ಮಸ್ ಹಬ್ಬಕ್ಕೆ ತಾಯಿ ಮನೆಗೆ ಹೋಗಿದ್ದ ಕಿಟ್ಟು ಅವಳ ಫೋಟೋ ತಂದು ತಾತನ ಕೈಗಿತ್ತ. ತಾತ ಅದನ್ನೆತ್ತಿಕೊಂಡು ಎವೆಯಿಕ್ಕದೆ ನೋಡಿದರು. ಕಣ್ಣೀರು ಹರಿಯ ತೊಡಗಿತು. "ನಿನ್ನ ಬಾಳು ಇಲ್ಲಿ ಕಾದಿರುವಾಗ ಯಾರೇನು ಮಾಡಬಲ್ಲರು." ಎಂದು ಉದ್ಗಾರ ತೆಗೆ

ದರು. ಅಂದಿನಿಂದ ಮಗಳನ್ನು ನೋಡುವ ಆಶೆಯಾದಾಗಲೆಲ್ಲ ಆ ಚಿತ್ರವನ್ನು ನೋಡಿಕೊಳ್ಳುತ್ತಿದ್ದರು ರಾಮಯ್ಯ.

ಬೇಸರವಾದಾಗ, ಸಮಯ ಕಳೆದು ಹೋಗದಾಗ ಭಾರತ-ರಾಮಾಯಣ ಓದುವುದು ಅವರ ಪದ್ಧತಿ. ಆ ದಿನ ಜೈಮಿನಿ ಭಾರತವನ್ನು ಕೈಗೆತ್ತಿಕೊಂಡು ಮನೆಯ ಜಗಲಿಯಲ್ಲಿ ಕುಳಿತು ಓದುತ್ತಿದ್ದರು. ಓದು ನಡೆಸಿದಂತೆ ಅವರ ಸ್ವರ ಗಂಭೀರವಾಯಿತು. ಕಥಾ ಸಂವಿಧಾನದಲ್ಲಿ ತಲ್ಲೀನರಾಗಿ ಬಹಳ ಹೊತ್ತು ಓದಿದರು ಅಧ್ಯಾಯ ಮುಗಿಯಿತು. ಪುಸ್ತಕಕ್ಕೆ ನಮಸ್ಕರಿಸಿ, ಅದನ್ನು ಪಟ್ಟೆ ಇಟ್ಟು, ತಲೆ ಎತ್ತಿದರು. ಕೆಲ ತಿಂಗಳ ಹಿಂದೆ ಅವರೇ ನೆಟ್ಟಿದ್ದ ತುಳಸಿಗಿಡದ ಬಳಿ ನಾಲ್ಕಾರು ಮಂದಿ ಹಿರಿಯರು ಕುಳಿತು ರಾಮಯ್ಯನ ವಾಚನವನ್ನು ಆಲಿಸುತ್ತಿದ್ದರು. ಓದು ನಿಂತೊಡನೆ ಅವರಲ್ಲೊಬ್ಬ ಮುಂದೆ ಬಂದು ರಾಮಯ್ಯನವರನ್ನು ವಂದಿಸಿದ.

"ಏನು ಬಂದೆಯಪ್ಪಾ?"

"ಹಾಗೇ ಬೀದಿಯಲ್ಲಿ ಹೋಗುತ್ತಿದ್ದೆ. ತಮ್ಮ ವಾಚನ ಕೇಳಿ ಬಂದೆ"

"ಏನೋ ಹಳ್ಳಿಯವನ ಓದು. ನಮ್ಮದೆಲ್ಲ ಯಕ್ಷಗಾನದ ಮಟ್ಟು"

"ಬಹಳ ಚೆನ್ನಾಗಿ ಓದುತ್ತೀರಿ ಸ್ವಾಮಿ. ಯಾವ ಯಾವ ದಿನಗಳಲ್ಲಿ ತಾವು . . . . ."

"ದಿನವೂ, ಬೇಸರವಾದಾಗಲೆಲ್ಲ ಓದುತ್ತೇನೆ. ಕೇಳುವ ಕುತೂಹಲವೇನು?"

"ಹೌದು ಸ್ವಾಮಿ. ತಾವು ಓದಿ ಕತೆ ಹೇಳಿದರೆ ಕೇಳಿ ಪುಣ್ಯ ಸಂಪಾದಿಸಬಹುದು."

"ಆಗಲಿ ಅದಕ್ಕೇನು?"

"ರಾಮಯ್ಯನವರ ಭಾರತವಾಚನ ಸುಗಮವಾಗಿ ಸಾಗಿತು. ನಾಲ್ಕೆಂಟು ಮಂದಿಗೆಂದು ಆರಂಭವಾದದ್ದು ಊರಿನ ಎಲ್ಲರಿಗೂ ಸಂತೋಷವನ್ನುಂಟು ಮಾಡಿತು. ತನ್ನಿಂದಾದ ಕರ್ತವ್ಯ ಮಾಡುತ್ತೇನೆ ಎಂದು ರಾಮಯ್ಯ ನಿರ್ಧರಿಸಿದರು. ಅವರ ವಾಚನಕ್ಕೆ ಬೊಕ್ಕಪಟ್ಣದ ಜನ ಮಾರು ಹೋದರು. ತಮ್ಮಿಂದ ಸಾಧ್ಯವಾದ ಸಹಾಯವನ್ನೂ ಜನರು ಉದಾರವಾಗಿ ಮಾಡಿದರು ಕೇಳದೇ ಕಾಣಿಕೆಗಳು ಬಂದುವು. ರಾಮಯ್ಯನ ಜನಾದರಣೆ ಕಿಟ್ಟಪ್ಪನ ಹೆಗಲಮೇಲಿನ ಭಾರವನ್ನು ಇಳಿಸಲು ಸಹಾಯಕವಾಯಿತು. ದುಡಿಮೆಯ ಚಿಂತೆಯ ಕಾಟ ಕಡಿಮೆಯಾಯಿತು.

# ಹತ್ತು

"ರಾಮು ಊರುಬಿಟ್ಟು ಹೊರಟುಹೋದ"

"ಎಲ್ಲಿಗೆ?"

"ಏನೂ ತಿಳಿಯದು. ಸಾಹುಕಾರರಿಗೆ ನೋಟು ಬರೆದು ಕೊಟ್ಟು ಹಣ ತೆಗೆದುಕೊಂಡಿದ್ದಾನೆ."

"ಯಾವ ಊರಿಗೆ ಹೋದನೋ?"

"ಎಲ್ಲಾದರೂ ಹೋಗುತ್ತೇನೆ. ಸನ್ಯಾಸಿಯಾಗುತ್ತೇನೆ. ನನ್ನನ್ನು ಹುಡುಕಬೇಡಿ ಎಂದು ಕಾಗದ ಬರೆದಿಟ್ಟಿದ್ದಾನೆ"

ಉಡುಪಿಗೆ ಹೋಗಿದ್ದ ಗಣಪಯ್ಯ ಈ ವಾರ್ತೆ ತಂದು ತಂಗಿಯ ಮುಂದಿರಿಸಿದರು. ಗಂಗಮ್ಮನವರಿಗೆ ತಲೆಗೆ ಸಿಡಿಲು ಬಡಿದಂತಾಯಿತು; ಕಣ್ಣೀರು ಉಕ್ಕಿ ಹರಿದು ಬಂತು. ಗಣಪಯ್ಯ ತಾನು ತಂದಿದ್ದ ಪತ್ರವನ್ನೂ ಅವರ ಕೈಲಿಟ್ಟರು.

"ಅವನ ಮನಸ್ಸಿಗೆ ಒಪ್ಪಿದ ದಾರಿ ಹಿಡಿಯಲಿ, ನಾನೇನು ಬೇಡ ವೆಂದೆನೇ? ಊರು ಬಿಟ್ಟು ಹೋಗಬೇಕೇ......" ಎಂದು ಅವರು ಗೋಳಿಟ್ಟರು. ಗಣಪಯ್ಯ ತನಗೆ ತಿಳಿದಿದ್ದ ವೇದಾಂತವನ್ನೆಲ್ಲ ಉಪ ಯೋಗಿಸಿ ಅವರನ್ನು ಸಮಧಾನ ಪಡಿಸಲು ಯತ್ನಿಸಿದರು. ಆದರೆ, ಅದರಿಂದ ಗಂಗಮ್ಮನವರು ಎಲ್ಲರಿಗೂ ತಿಳಿಯುವಂತೆ ದುಃಖಿಸುವುದು ಮಾತ್ರ ಕಡಿಮೆಯಾಯಿತು. ಅವರ ಮನಸ್ಸಿನ ಚಿಂತೆ ಮಾತ್ರ ದೂರ ವಾಗಲಿಲ್ಲ.

ಗಂಗಮ್ಮ ಶಾಂತ ಪ್ರಕೃತಿಯವರು. ಅವರ ಯೋಚನೆ, ವಿಚಾರ ಧಾರೆ, ಮನೋಭಾವಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ತನ್ನ ಬಾಳಿನಲ್ಲಿ ಸುಖ–ದುಃಖಗಳನ್ನೆಲ್ಲ ಕಂಡು ಉಂಡವರು. ಕಠಿಣ ಹೃದಯ ತೋರುವುದೂ, ಕರುಣೆ ಬೀರುವುದೂ ಎರಡೂ ಅವರಿಗೆ ಅರಿತಿತ್ತು. ಎಂತಲೇ ಜಮೀನಿನ ಆಡಳಿತೆ ಸುವ್ಯವಸ್ಥಿತವಾಗಿ ನಡೆಸಿಕೊಂಡು ಬರು ತ್ತಿದ್ದರು. ಯಾವ ರೈತನಿಗೂ ಅವರ ಮಾತನ್ನು ಮೀರುವ ಧೈರ್ಯ ವಿರಲಿಲ್ಲ. ಬೆಳೆ ಬೆಳೆದಾಗ ರೈತ ಗೇಣಿ ಬಾಕಿಮಾಡಿಕೊಳ್ಳುವಂತಿರಲಿಲ್ಲ.

ಬೆಳೆಯುದಾಗ ಗಂಗಮ್ಮನವರು ತಾವೇ ರೈತನಿಗೆ ಸವಲತ್ತು ಒದಗಿಸುತ್ತಿದ್ದರು. ಅವರಿದ್ದಾಗ ಇದ್ದ ಗೇಣಿ ಕೊಟ್ಟುಬಿಡಿ; ಇನ್ನೂ ನಾಲ್ಕು ಎಕರೆ ಹೊಲದಲ್ಲಿ ಬೆಳೆ ಬೆಳೆಯಿಸಿರಿ, ನಾನು ಬೇಡವೆನ್ನುವುದಿಲ್ಲ-ಎಂದು ರೈತರನ್ನು ಹುರಿದುಂಬಿಸುತ್ತಿದ್ದರು. ಅವರ ಉದಾರತೆಯಿಂದ ಪ್ರತಿಯೊಬ್ಬ ರೈತನೂ ನಾಲ್ಕಾರು ವರ್ಷಗಳ ಗೇಣಿಯುನ್ನೂ ಒಮ್ಮೆಗೇ ಒಪ್ಪಿಸಬಲ್ಲ ಧನಿಕನೂ ಆಗಿದ್ದ; ಅಷ್ಟೇ ಅಲ್ಲ; ರೈತ ದಾರಿ ತಪ್ಪಿ, ಹಣ ಪೋಲು ಮಾಡಿ, ಸಂಸಾರವನ್ನು ಸಂಕಟಕ್ಕೆ ದೂಡುತ್ತಿದ್ದಾನೆ ಎಂದು ತಿಳಿದಾಗ ಗಂಗಮ್ಮ ಕೊಡುವ ಶಿಕ್ಷೆಯು ಪರಿಚಯು ರೈತರಿಗಿತ್ತು. "ಯಾರನ್ನಾದರೂ ರೇಗಿಸಬಹುದು; ಈ ಅಮ್ಮನನ್ನಲ್ಲ. ಇವರು ಹೊಟ್ಟೆತುಂಬ ಅನ್ನಕೊಟ್ಟು ಮೂಳೆಮುರಿಯಿಸುತ್ತಾರೆ" ಎನ್ನುತ್ತಿದ್ದರು ಅವರ ರೈತರು.

ರಾಮು ಊರು ಬಿಟ್ಟುದರಿಂದ ಅವರ ಉತ್ಸಾಹ ಹಿಂಗಿತು, ಆರೋಗ್ಯ ಕಟ್ಟಿತು; ಜೀವನವೇ ಬೇಡ, ಎಂಬ ವೈರಾಗ್ಯ ಅವರಲ್ಲಿ ಬೆಳೆಯಿತು. ತಂಗಿಯ ಮನಸ್ಸಿಗೆ ನೆಮ್ಮದಿ ತರಲೆಂದು ಗಣಪಯ್ಯ ಹತ್ತಾರು ಊರುಗಳಲ್ಲಿ ಸಂಚರಿಸಿ ಬಂದರು. ಅವರಿಗೂ ರಾಮುವಿನ ಸುಳಿವು ಗೊತ್ತಾಗಲಿಲ್ಲ.

ವೆಂಕಟ್ರಾಯರು ಒಮ್ಮೆಗೇ ಎಚ್ಚರವಾದರು. ತಮ್ಮನ ಬಗೆಗೆ ಅವರ ಕಳವಳವೂ ಹೆಚ್ಚಿತು. ಇದ್ದವರು ಇಬ್ಬರು; ರಾಮಲಕ್ಷ್ಮಣರಂತೆ ಬೆಳೆದವರು; ಈಗ ಒಬ್ಬ ಊರುಬಿಟ್ಟು ಹೋದ. ಅವರ ವಿಲಾಸ ವಿನೋದಗಳನ್ನಿದು ಕಲಕಿತು, ಕರ್ತವ್ಯದೆಡೆ ತಿರುಗಿಸಿತು. ಅತ್ತ ತಾಯಿಯೂ ಜೀವನವೇ ಬೇಸರವಾದಂತಿದ್ದಳು. ಅವಳಲ್ಲಿ ಯಾವ ಉತ್ಸಾಹವೂ, ಹರುಷವೂ, ಆಶೆಯೂ ಉಳಿದಿರಲಿಲ್ಲ. ಹೇಗಾದರೂ ಬಾಳಿ ಸತ್ತರಾಯಿತು. ನಾಳೆ ಸಾಯುವ ನನಗೇಕೆ ಚಿಂತೆ ಎಂದು ಗಂಗಮ್ಮ ದೇವರ ಕಡೆಗೆ ತನ್ನ ದೃಷ್ಟಿ ಹರಿಯಿಸಿದ್ದರು ತಾನಿನ್ನೂ ಹೀಗೆ ನಿಂತರೆ ಸಾಧ್ಯವಿಲ್ಲ ಎಂಬುದು ರಾಯರಿಗೂ ತಿಳಿದುಬಂತು. ರಾಮುವಿನ ಪ್ರಕರಣ ಅವರ ಹೃದಯವನ್ನೂ ಚುಚ್ಚದೆ ಬಿಡಲಿಲ್ಲ. ಜೀವನದ ಇಂಥ ಗ್ರಹಣದ ಕಾಲದಲ್ಲಿ, ತಾಯಿ ಮಕ್ಕಳಿಬ್ಬರೂ ಚಿಂತೆಯನ್ನು ಮರೆಯುವುದು ಸಾಧ್ಯವಾಗದೆ ತಳಮಳಿಸುತ್ತಿದ್ದಂತೆ, ರಾಯರ ಪತ್ನಿ ಹೆಣ್ಣುಮಗುವನ್ನು ಹೆತ್ತು ಮನೆಗೆ ಹರ್ಷವನ್ನು ತಂದುಕೊಟ್ಟಳು.

ಒಂದು ವರ್ಷ ರಾಮು ಮನೆಯನ್ನು ಚಿಂತೆಯ ಮಡುವಿನಲ್ಲಿ ದೂಡಿದ್ದ. ಈಗ ಒಂದು ವರ್ಷ ರಾಯರ ಮಗು ವಿಮಲ ಮನೆಯಲ್ಲಿ ದೀಪಾವಳಿಯನ್ನು ಉಂಟುಮಾಡಿದಳು. ರಾಯರು, ಅವರ ತಾಯಿ, ಮಾವ, ಬಂಧುಗಳಿಗಿಂತ ಹೆಚ್ಚಾಗಿ ರೈತರು ಆನಂದದಿಂದ ನಲಿದರು. ಗಂಡು ಹುಟ್ಟಿದರೆ . . . . . ಎಂಬ ಚಿಂತೆ ಅವರೆಲ್ಲರಿಗೂ ಇರದಿರಲಿಲ್ಲ. ಆದರೆ ಹೆಣ್ಣಾದರೇನು? ಭಾಗ್ಯಲಕ್ಷ್ಮಿ ಕಾಲಿಟ್ಟಳು ಎಂದು ಸಂತೃಪ್ತರಾಗು ತ್ತಿದ್ದರು.

ಮಗು ಮನದಲ್ಲಿ ಮನೆಯಲ್ಲಿ ಬೆಳದಿಂಗಳು ಚೆಲ್ಲಿದಂತೆ ಆ ತಿಂಗಳ ಹಿಂದೆಯೇ ಮೋಡವನ್ನು ನೆಳೆಯಿತು. ರಾಯರ ಪತ್ನಿ ಹಾಸಿಗೆ ಹಿಡಿದರು. ಅವರ ಅನಾರೋಗ್ಯ ಯಾವುದು ಯಾಕೆ ಬಂತು ಎಂಬುದು ಯಾರಿಗೂ ತಿಳಿಯಲಿಲ್ಲ. ಆದರೂ ದಿನೇ ದಿನೇ ಕ್ಷೀಣವಾಗುತ್ತ ಬಂದು ಅವರು ಹಾಸಿಗೆ ಹಿಡಿದಿದ್ದರು. ಊರ ವೈದ್ಯರೆಲ್ಲ ತಮ್ಮ ಜಾಣ್ಮೆಯನ್ನು ಪ್ರಯೋ ಗಿಸಿದರು; ಎಲ್ಲ ಯತ್ನವನ್ನೂ ನಡೆಸಿ ಸೋತರು. ಇದು ಬಾಣಂತಿ ರೋಗ ಎಂದು ಹೆಸರಿಟ್ಟರು. ಡಾಕ್ಟರರು ಬಂದು ಇದು ಎನಿಮಿಯ ಎಂದರು. ಆದರೆ, ಎಲ್ಲರ ಕೊನೆಯ ನುಡಿಯೂ ಒಂದೇ; ಮಂಗಳೂರಿಗೆ ಹೋಗಿ ಚಿಕಿತ್ಸೆ ಮಾಡಿಸುವುದೇ ಮೇಲು—ಎಂದು, ಬೇರೆ ದಾರಿ ಕಾಣದ ರಾಯರೂ ಈ ಯೋಜನೆಗೆ ಒಪ್ಪಿದರು. ಎರಡು ವರ್ಷದ ವಿಮಲನನ್ನೆತ್ತಿ ಕೊಂಡು ಸೊನೆಯನ್ನೂ ಕರೆದುಕೊಂಡು ರಾಯರ ತಾಯಿ ಮಂಗಳೂರಿಗೆ ಬಂದರು. ಗಣಪಯ್ಯ ಉಪ್ಪೂರಿನ ಮನೆಯ ಮೇಲ್ವಿಚಾರಣೆಯ ಹೊಣೆ ಹೊತ್ತು ಕುಳಿತರು.

ಮಂಗಳೂರಿನಲ್ಲಿ ರಾಯರ ಮನೆ ಬಂಗಲೆಯಾಗೇ ಇತ್ತು. ನಗರಕ್ಕೆ ಬಂದ ಮೇಲೆ ಅಲ್ಲಿನವರಂತೆ ಇರಬೇಕು; ತನ್ನ ಯೋಗ್ಯತೆಗೆ ಸರಿಯಾದ ಜೀವನ ಸಾಗಿಸಬೇಕು ಎಂಬುದನ್ನು ಅವರು ಮರೆಯಲಿಲ್ಲ. ವರುಷ ಕಳೆ ಯುವುದರೊಳಗಾಗಿ ಸ್ವಂತ ಮನೆಯೂ, ಕಾರೂ ಬಂದುವು. ಆಳು, ಕೆಲಸದ ಹೆಂಗಸು, ಅಡಿಗೆಯ ಮಾಣಿ, ಡ್ರೈವರ್ ಸುಬ್ರಾಯ ಸೇರಿ ಕೊಂಡರು. ಅವರಾಕೆಯ ಆರೋಗ್ಯ ಕೊಂಚಮಟ್ಟಿಗೆ ಸುಧಾರಿಸಿತಾ ದರೂ ಪೂರ್ಣವಾಗಿ ಎದ್ದು ತಿರುಗಾಡುವ ಸ್ಥಿತಿಗವರು ಮುಟ್ಟಿರಲಿಲ್ಲ. ಅವರ ಎಲ್ಲ ಬೇಸರವನ್ನೂ ಮರೆಯಲು ವಿಮಲ ಸಹಾಯಕಳಾಗಿ

ಬೆಳೆದು ಬರುತ್ತಿದ್ದಳು. ರಾಯರೇ ಅದಕ್ಕೆ ಸರ್ವಸ್ವ; ಅವರಿಗೆ ಅದೇ ಬೆಳಕು.

ರಾಯರ ಮನಸ್ಸಿನ ಚಿಂತೆ ಹರಿಯಿತೆನ್ನುವಷ್ಟರಲ್ಲಿ ಅವರ ತಾಯಿ ಹೃದಯ ಬೇನೆಯಿಂದ ತೀರಿಕೊಂಡರು. ಎರಡು ವಾರ ಹಾಸಿಗೆ ಹಿಡಿದ ವರು ಮತ್ತೆ ಏಳಲಿಲ್ಲ. ಪುಣ್ಯಮಾಡಿದ ಜೀವ ಎಂದುಕೊಂಡು ರಾಯರು ದುಃಖವನ್ನು ಮರೆತುಬಿಡಲು ಯತ್ನಿಸಿದರು. ಆದರೆ, ಆ ದುಃಖ ಹೃದಯದ ಒಳಗೇ ನೇರಿಕೊಂಡು ಅವರನ್ನು ಪೀಡಿಸುವುದನ್ನು ನಿಲ್ಲಿಸಲಿಲ್ಲ. ಗಣಪಯ್ಯನ ವೇದಾಂತ, ಉಪದೇಶ, ಸಹಾಯಗಳು ಮಾತ್ರ ಅವರಿಗೆ ಧೈರ್ಯವೀಯುವ ಜ್ಯೋತಿಗಳಾದುವು.

ಮನದ ಚಿಂತೆ, ಮನೆಯ ಚಿಂತೆಗಳನ್ನು ಮರೆಯಲು ರಾಯರು ದಾರಿ ಹುಡುಕಬೇಕಾಯಿತು. ಸುಬ್ರಾಯನ ಸಲಹೆ ಸೂಚನೆಯಂತೆ ಅವರು ಸಾಹುಕಾರರಾದರು ಬಂದರಿನಲ್ಲಿ ಅಕ್ಕಿ ವ್ಯಾಪಾರ ಆರಂಭಿಸಿ ತಮ್ಮ ಚಿಂತೆಯನ್ನೆಲ್ಲ ಮರೆಯಲು ಯತ್ನಿಸಿದರು.

ಹೊಸದರಲ್ಲಿ ರಾಯರ ವ್ಯಾಪಾರ ಚೆನ್ನಾಗೇ ಸಾಗಿತು. ಬಂದರಿನ ಇತರ ವ್ಯಾಪಾರಿಗಳೆಲ್ಲ ತಮ್ಮ ಸಹಕಾರ ಸಹಾಯ ನೀಡುವ ಭರವಸೆ ಯಿತ್ತು ರಾಯರನ್ನು ಹುರಿದುಂಬಿಸಿದರು. ರಾಯರು ದೊಡ್ಡ ವ್ಯಾಪಾರಿ ಗಳೆಂದು ಹೆಸರುಗಳಿಸಿದರು. ಸಾವಿರಾರು ಮುಡಿ ಅಕ್ಕಿ ಅವರ ಅಂಗಡಿಗೆ ಬಂದು ಇತರ ಅಂಗಡಿಗಳಿಗೆ ಹೊರಟಿತು. ಜತೆಗೆ ಅಡಿಕೆ, ಯಾಲಕ್ಕಿ, ಕಾಫಿ ವ್ಯಾಪಾರವನ್ನೂ ಆರಂಭಿಸಿದರು. ಆದರೆ, ವ್ಯಾಪಾರೀ ಮನೋ ಭಾವ ಅವರನ್ನಿನ್ನೂ ಅವಲಂಬಿಸಿರಲಿಲ್ಲ.

ಹೊಸ ವ್ಯಾಪಾರಿಯನ್ನು ಆದರಿಸಿ, ಬರಮಾಡಿಕೊಂಡು, ಅವನಿಗೆ ವ್ಯಾಪಾರದ ರುಚಿ ಹತ್ತಿಸುವುದರಲ್ಲಿ ಬಂದರಿನ ವ್ಯಾಪಾರಿಗಳಿಗೆ ಮೊದಲ ಸ್ಥಾನ ಸಲ್ಲಬೇಕು. ಆದರೆ, ಅವರಲ್ಲಿ ಕೆಲವರ ವ್ಯಾಪಾರೀ ರಾಜತಂತ್ರ ಮಾತ್ರ ಸಾಮ್ರಾಜ್ಯಶಾಹಿ ತಂತ್ರವನ್ನೂ ಹಿಂದೂಡುವಂತಹದು. ರಾಯರು ಯಾರೊಡನೆ ಯಾವ ವ್ಯಾಪಾರವನ್ನು ಹೇಗೆ ನಡೆಸಬೇಕೆಂಬುದನ್ನು ಇನ್ನೂ ತಿಳಿಯದವರು ಎಂತಲೇ ಇಂತಹ ತಂತ್ರಗಳಿಗೆ ಬಲಿಬಿದ್ದರು. ಹತ್ತುಸಾವಿರ ಮುಡಿ ಅಕ್ಕಿಯನ್ನು ಕೊಂಡುಕೊಂಡು ಎಂಟಾಣೆ ಕಡಿಮೆ ಬೆಲೆಗೆ ವಿಕ್ರಯಿ ಸಿದರು. ಯಾಲಕ್ಕಿ ವ್ಯಾಪಾರದಲ್ಲಿ ಹತ್ತು ಸಾವಿರ ಕಳಕೊಂಡರು

ಎಲ್ಲ ವಿಚಾರಗಳಲ್ಲೂ ಅವರಿಗೆ ಸುಬ್ರಾಯನೇ ಮಂತ್ರಿಯಾದ. ರಾಯರಿಗೆ ಸುಬ್ಬ ಹೊಸಬನಲ್ಲ. ಅವನ ಅಪ್ಪ ಕಿಟ್ಟಣ್ಣ ರಾಯರ ಮನೆಯಲ್ಲಿ ಪೂಜೆ ಮಾಡಿ ಜೀವನ ನಡೆಸಿದವರು. ಸುಬ್ಬ ತನ್ನ ಹದಿನೈದನೇ ವರ್ಷದಲ್ಲೇ ಊರು ಬಿಟ್ಟು, ಮಂಗಳೂರಿಗೆ ಬಂದ. ಕೈಗೆ ದೊರೆತ ಕೆಲಸಗಳನ್ನು ಮಾಡಿ, ಮೋಟಾರು ತೊಳೆದು, ಅದರ ಕಂಡಕ್ಟರ್ ಆಗಿ ಕೊನೆಗೆ ಡ್ರೈವರ್ ಕೆಲಸ ಮಾಡಿಕೊಂಡು ಜೀವನ ನಡೆಸುತ್ತಿದ್ದನು. ರಾಯರು ಮಂಗಳೂರಿಗೆ ಬಂದೊಡನೆ ಮೊದಲು ಅವನೇ ಭೇಟಿಯಾದ. ಒತ್ತಾಯಕ್ಕೆ ರಾಯರು ಕಾರುಕೊಂಡುಕೊಂಡರು. ಸುಬ್ರಾಯ ಮನೆಯವನಾದ. ಅವರ ಕಾರಿನ ಡ್ರೈವರ್ ಆದ, ಕೊನೆಗೆ ಮಂತ್ರಿಯೂ ಆದ.

ಮಂಗಳೂರಿನ ಪರಿಚಯ ಚೆನ್ನಾಗಿದ್ದುದರಿಂದ ಸುಬ್ರಾಯನನ್ನು ಬಿಟ್ಟರೆ ರಾಯರು ಯಾವುದೇ ವಿಚಾರದಲ್ಲೂ ಮುನ್ನಡೆಯುವಂತಿರಲಿಲ್ಲ. ಆ ವ್ಯಾಪಾರಿ ಹೇಗೆ; ಈ ಗಿರಾಕಿಯ ಪರಿಸ್ಥಿತಿ ಹೇಗಿದೆ; ಯಾರನ್ನು ನಂಬಬಹುದು, ಯಾರು ಮೋಸಗಾರರು ಎಂಬ ಸಕಲ ವಿಚಾರಗಳಲ್ಲೂ ಸುಬ್ಬ ರಾಯರಿಗೆ ಸಲಹೆ ಮಾಡುತ್ತಿದ್ದ. ಅವನ ಸಲಹೆ ಅನೇಕ ವೇಳೆ ಅವರಿಗೆ ಸರಿಯೆನ್ನಿಸಿದೆ. ಮನೆಯ ವಿಚಾರದಲ್ಲೂ ಹಾಗೇ. ಮನೆಗೆ ಬೇಕಾದ ಸಾಮಗ್ರಿಗಳನ್ನು ತರುವುದಿರಲಿ, ಔಷಧ ತರುವುದಿರಲಿ, ವೈದ್ಯರನ್ನು ಕರೆತರುವುದಾಗಲಿ, ಮಗು ವಿಮಲನನ್ನೆತ್ತಿ ಆಡಿಸುವುದೇ ಆಗಲಿ–ಸುಬ್ರಾಯನೇ ಅದನ್ನು ಮಾಡಬೇಕಾಗಿತ್ತು.

ಸುಬ್ರಾಯನ ಸಲಹೆಯಂತೆ ರಾಯರು ಸಾಹುಕಾರರಾದರು. ಅವನ ಸಲಹೆಯಂತೆ ಮ್ಯಾನೇಜರರನ್ನು ಗೊತ್ತು ಮಾಡಿದರು. ಮ್ಯಾನೇಜರ್ ತುಂಬ ನಂಬಿಗಸ್ತನಾಗಿ ವ್ಯವಹಾರ ನಡೆಸುತ್ತಿದ್ದ. ರಾಯರ ಮುಂದೆ ಎಲ್ಲ ಬಗೆಯಿಂದಲೂ ವಿನಯ ತೋರ್ಪಡಿಸಿ ಅವರ ಮಾತಿಗೆ ಇದಿರಾಡದೆ ವ್ಯಾಪಾರ ವ್ಯವಹಾರ ನಡೆಸುತ್ತಿದ್ದ. ಅಂಗಡಿಯ ಚಿಂತೆಯೂ ಅವರಿಗೆ ಇದರಿಂದ ಕಡಿಮೆಯಾಯಿತು. ಒಂದೆರಡು ಬಾರಿ ತಡವರಿಸಬೇಕಾದ ನಷ್ಟದ ಏಟು ಬಿದ್ದಾಗ ಈ ವ್ಯಾಪಾರ ಸಾಕು ಎಂದೇನೋ ಅವರಿಗೆ ತೋರಿತ್ತು. ವ್ಯಾಪಾರದಲ್ಲಿ ಹೀಗೆ; ಒಮ್ಮೆ ಲಾಭ, ಒಮ್ಮೆ ನಷ್ಟ ಬಂದೇ ಬರುತ್ತೆ. ಇದಕ್ಕೆಲ್ಲ ಹೆದರಿದರೆ ಹೇಗೆ, ವ್ಯಾಪಾರ ನಿಲ್ಲಿಸಿದರೆ ಮಾನಕ್ಕೆ ಚ್ಯುತಿ ಎಂದು ಮ್ಯಾನೇಜರನೂ ಸುಬ್ರಾಯನೂ ರಾಯರನ್ನು ಹುರಿ

ದುಂಬಿಸಿದರು. ಆದರೆ, ಲಾಭವನ್ನು ಮಾತ್ರ ಅವರು ನೋಡುವುದು ಕಷ್ಟವಾಯಿತು.

ರಾಯರ ಪತ್ನಿಯ ಆರೋಗ್ಯ ಉನ್ನತಿಗಂತೂ ಏರಲೇ ಇಲ್ಲ. ಔಷಧ ಮಾಡಿಸಿ ರಾಯರೂ, ಕುಡಿದು ಅವರ ಪತ್ನಿಯೂ ಸೋತುಹೋದರು. ತನಗೆ ಕಾಯಿಲೆ ವಾಸಿಯಾಗುವುದಿಲ್ಲ ಎಂಬ ಚಿಂತೆಯಲ್ಲೇ ಆಕೆ ಅರ್ಧ ಇಳಿದುಹೋದರು. ವ್ಯಾಪಾರದಲ್ಲಿ ಲಾಭವಿಲ್ಲ; ಮನೆಯಲ್ಲಿ ನೆಮ್ಮದಿಯಿಲ್ಲ. ಈ ಪರಿಸ್ಥಿತಿಯಲ್ಲಿ ರಾಯರ ಮನಸ್ಸು ಪೂರ್ಣ ಕೆಟ್ಟಿತು. ಜೀವನದಲ್ಲಿ ನಗು ಅಳಿದು, ದುಃಖ ಬೆಳೆಯಿತು.

ಚಿಂತೆಯನ್ನೆಂದೂ ಅವರು ಬರಗೊಡಿಸಿದವರಲ್ಲ. ಆದರೆ ಈಗ, ಸುಖಿಸುವ ಕಾಲ ಕಳೆಯುತ್ತ ಬರುತ್ತಿದೆ, ಚಿಂತೆಯೂ ಹತ್ತಿರವಾಗುತ್ತಿದೆ. ದುಃಖವನ್ನು ಮರೆಯಲೆತ್ನಿಸಿದಷ್ಟಕ್ಕೂ ಅದು ಅವರ ಬೆನ್ನಿಗೆ ಅಂಟಿಕೊಂಡೇ ನಿಂತಿತ್ತು. ಯೋಚಿಸಿದಷ್ಟಕ್ಕೂ ಅವರ ಮುಂದೆ ನಿಂತ ಪ್ರಶ್ನೆ ಒಂದೇ "ನನ್ನ ಸುಖದ ದಿನಗಳು ಕಳೆದು ಹೋದುವೇ?"

ಯವ್ವನ ಮಾನವನ ಬಾಳಿನಲ್ಲಿ ಒಂದೇ ಬಾರಿ ಬರುತ್ತೆ. ಬಂದಾಗ ಸುಖವನ್ನು ಅನುಭವಿಸಲೇಬೇಕು. ಚಿಂತೆ ಆಗಾಗ ಬರುತ್ತಲೇ ಇರುತ್ತೆ. ಆಗ ಕಳೆದ ಸುಖದಿನಗಳನ್ನು ನೆನೆದು ಚಿಂತೆಯನ್ನು ಕಳೆದುಕೊಳ್ಳಬೇಕು.

ಆದರೆ . . . . . ಯವ್ವನ ಮುಗಿಯುತ್ತ ಬರುತ್ತಿದೆ. ಸುಖಕ್ಕೆ ಸಾಧನವಾದ ಸಂಪತ್ತೂ ಕರಗುತ್ತಿದೆ. ಈ ಎರಡು ಸಮಸ್ಯೆಗಳು ಅವರ ಮನವನ್ನು ಬೇಕು-ಬೇಡ ಎಂದು ಇಕ್ಕಡೆಗೆ ಎಳೆದು ಹರಿಯುತ್ತಿದ್ದುವು. ಆ ಎಳೆತ ಅವರ ವಿವೇಚನೆಯನ್ನು ಕೆಡಿಸಿತು; ಮುಂದೆ ಯೋಚನೆಯೇ ಹೊಳೆಯದಾಯಿತು, ಸುಮ್ಮನೆ ಹಾಸಿಗೆಯಲ್ಲಿ ಬಿದ್ದುಕೊಂಡರು.

ಗಂಟೆ ನಾಲ್ಕು ಬಾರಿಸಿತು.

ಡ್ರೈವರ್ ಸುಬ್ರಾಯ ಕೋಣೆಯ ಬಾಗಿಲನ್ನು ಮೆಲ್ಲನೆ ಸರಿಸಿ ಒಳ ಬಂದು ರಾಯರ ಮುಂದೆ ನಿಂತ.

ಅವನಿಗೆ ಆ ಅಧಿಕಾರ ಎಂದೋ ದೊರೆತಿತ್ತು.

ಆದರೆ ರಾಯರು ಯಾವುದೋ ಯೋಚನೆಯಲ್ಲಿ ತಲ್ಲೀನರಾಗಿದ್ದರು. ಎಚ್ಚರವಿದ್ದಂತೆ ಕಾಣುತ್ತಿತ್ತು; ಆದರೆ ನಿದ್ರೆ ಆವರಿಸಿತ್ತು. ಏನೋ ಕನಸು ಕಾಣುತ್ತಲಿದ್ದರು ಅವರು. ಕಣ್ಣ ಕೊನೆಯಿಂದ ಹನಿ ಜಿನುಗುತಿತ್ತು.

ಸುಬ್ರಾಯ ನಿಂತೇ ಇದ್ದ.

ನಿಮಿಷ ಐದಾಯಿತು, ಹತ್ತಾಯಿತು . . . . .

'ರಾಯರೇ' . . . . ಎಂದು ಒಳದನಿಯಲ್ಲಿ ಕೂಗಿದ

ಸುಬ್ರಾಯನ ಕೂಗು ಅವರನ್ನು ಎಚ್ಚರಿಸಿತು. ಕಣ್ಣು ತೆರೆದು ನೋಡಿ, ಮೆಲ್ಲನೆ ಮೇಲಕ್ಕೆದ್ದರು.

"ಗಂಟೆ ಎಷ್ಟು ಸುಬ್ಬಾ . . . . ."

"ನಾಲ್ಕೂವರೆಗೆ ಹತ್ತಿರವಾಯಿತು ರಾಯರೇ . . . ."

"ಎಲ್ಲಾದರೂ ಹೋಗೋಣ. ಅಂಗಡಿಗೆ ಹೋಗುವುದಿಲ್ಲ".

ರಾಯರು ಎದ್ದು ಮುಖ ತೊಳೆಯಲು ಹೋದರು. ಉಡಿಗೆ ಧರಿಸಿ ಹೊರಡುವ ಹೊತ್ತಿಗೆ ಮಗು ವಿಮಲ ಅವರ ಹಿಂದೆ ನಿಂತಳು. ತಾನೂ ಬರುತ್ತೇನೆಂದು ಹಟ ತೊಟ್ಟಳು. ಆ ಬಳಿಕ ಹೋಗೋಣ ಎಂದು ಆ ಅರುಕಳೆದ ಮಗಳನ್ನು ಸಮಧಾನಗೊಳಿಸಿ ರಾಯರು ಹೊರಟರು. ಕಾರು ಕದ್ರಿ ಬೆಟ್ಟವನ್ನೇರಿ, ಒಂದು ಮರದಡಿಯಲ್ಲಿ ನಿಂತಿತು. ರಾಯರು ಕೆಳಗಿಳಿದು ಹಾಸುಕಲ್ಲಿನ ಮೇಲೆ ಕುಳಿತರು. ಸುಬ್ರಾಯ ಕಾರಿನ ಮಗ್ಗುಲಿಗೆ ಒರಗಿ ನಿಂತಿದ್ದ.

"ಇತ್ತ ಬಾ ಸುಬ್ಬಾ . . . . ."

ಸುಬ್ರಾಯ ರಾಯರ ಹತ್ತಿರಕ್ಕೆ ಬಂದು ನಿಂತುಕೊಂಡ ರಾಯರ ಅಪ್ಪಣೆಯಂತೆ ಅವನು ಕುಳಿತುಕೊಳ್ಳಬೇಕಾಯಿತು. ಸ್ವಲ್ಪಹೊತ್ತು ಮೌನವಾಗಿದ್ದು ರಾಯರು ಮಾತೆತ್ತಿದರು.

"ಈ ಜೀವಕ್ಕೆ ಸುಖವೇ ಇಲ್ಲವೇ ಸುಬ್ಬಾ?"

"ಯಾಕೆ ರಾಯರೆ? ತಾವು ಬಯಸಿದ್ದು ತಮ್ಮದು."

"ಆದರೆ ಬಯಸದೆ ಇದ್ದುದೇ ಸದಾ ಬರುತ್ತಲಿದೆ."

ರಾಯರು ತನ್ನ ಮನದ ದುಃಖವನ್ನು ಸೂಕ್ಷ್ಮವಾಗಿ ತಿಳಿಸಿದರು. ಸುಬ್ರಾಯ ಚಿಂತೆಯ ಮುಖಮುದ್ರೆಯಿಂದ ಅವರ ಮಾತುಗಳನ್ನು ಕೇಳುತ್ತ ಆಗೊಮ್ಮೆ ಈಗೊಮ್ಮೆ ಒಂದೊಂದು ಮಾತು ಆಡುತ್ತಿದ್ದ. ಈ ಸಮಸ್ಯೆ ಬಗೆಹರಿಸುವ ಬಗೆಗೆ ಅವನು ಯೋಚಿಸುತ್ತಲೇ ಇದ್ದ.

ಕತ್ತಲಾಯಿತು. ಇಬ್ಬರು ಹೊರಟು ಮನೆ ತಲುಪಿದರು.

ಇನ್ನೊಂದು ತಾಸಿನಲ್ಲಿ ಬರುತ್ತೇನೆ ಎಂದು ಸುಬ್ರಾಯ ಹೊರಟು

ಹೋದ. ಊಟ ಮುಗಿಸಿ ರಾಯರು ಕುಳಿತುಕೊಂಡರು. ಮಗು ವಿಮಲ ಅವರ ಬಳಿಯಲ್ಲೇ ಕುಳಿತಿದ್ದು, ಅಡಿಕೆಎಲೆ ಸರಿಪಡಿಸುತ್ತಿದ್ದಳು. ಸುಬ್ರಾಯ ಕೋಣೆಯೊಳಕ್ಕೆ ಬಂದ.

'ಕಾರು ಸಿದ್ಧಪಡಿಸುತ್ತೇನೆ. ಹೊರಡೋಣ'

ರಸಿಕರಾದ ರಾಯರಿಗೆ ರಹಸ್ಯ ಪೂರ್ಣವಲ್ಲದಿದ್ದರೂ ಕೊಂಚ ತಿಳಿಯಿತು. ಅವರು ಹೊರಟು ನಿಂತರು. ಕಾರು ಮನೆಯ ಅಂಗಳವನ್ನು ಬಿಟ್ಟು ಹೊರಟಿತು.

"ಕ್ಷಮಿಸಿ ರಾಯರೇ. ಗುರ್ಪುರದ ಪ್ರಯಾಣಿಕರ ಬಂಗ್ಲೆಗೆ ಕರೆದೊಯ್ಯುತ್ತಿದ್ದೇನೆ."

"ಆಗಲೇ ಗೊತ್ತು. ಸ್ವಲ್ಪ . . . . ಹಣ್ಣು"

"ಎಲ್ಲವೂ ಸಿದ್ಧವಾಗಿದೆ. ಹೂವು ಕೂಡಾ . . . . ."

"ತುಂಬ ಗಟ್ಟಿ ಅಸಾಮಿ ನೀನು" ಎಂದು ರಾಯರು ನಕ್ಕರು. ಕಾರು ನಿಂತಿತು; ರಾಯರು ನಗು ನಿಲ್ಲಿಸಿದರು. ತರುಣಿಯೊಬ್ಬಳು ಕಾರನ್ನೇರಿ ಕುಳಿತುಕೊಂಡಳು.

ಸುಬ್ರಾಯನ ಕನಸು ನಿಜವಾಯಿತು.

ರಾಯರ ಹಳೆಯ ಕತೆ ಕೇಳಿದ್ದ ಅವನು ಬಹಳ ಉತ್ಸಾಹದಿಂದ ಅವರ ಸೇವೆಗೆ ನಿಂತ. ತನ್ನ ಪಾಡಿಗೆ ತಾನೆಲ್ಲ ಸುಖವನ್ನೂ ಅವನು ಕಂಡಿದ್ದ, ಆದರೆ, ರಾಯರಲ್ಲಿ ಅವನು ಕೇಳಿದ ಕತೆಗಳ ಕುರುಹನ್ನೇನೂ ಕಾಣಲಿಲ್ಲ. ತನ್ನ ಅಂಗಡಿ, ಕ್ಲಬ್ಬು, ಮನೆ-ಇದಲ್ಲದೆ ಅವರಿಗೆ ಬೇರೇನೂ ಬೇಕಾಗಿರಲಿಲ್ಲ. ಮನಬಂದಂತೆ ಖರ್ಚುಮಾಡುತ್ತಿದ್ದರೇನೋ ನಿಜ. ಆದರೆ, ಅದೆಲ್ಲ ನಿತ್ಯಜೀವನಕ್ಕೆ, ಸಂಸಾರಕ್ಕೆ. ಆದರೂ ನಾಯಿ ಕಾದಿತ್ತು.

ಒಂದು ದಿನ ರಾಯರು ಈ ದಾರಿ ತುಳಿದರೆ ಮುಂದೆ ತನ್ನ ಜೀವನ ಹಾಲು ಜೇನು ಆಗುವುದೆಂಬ ಕನಸನ್ನು ಅವನು ಕಾಣುತ್ತಿದ್ದ. ರಾಯರ ಹಳಸಿದ ಹೃದಯ ಇಂದು ಅವನಿಗೆ ದೊರೆಯಿತು. ರಾಯರು ಆ ರಾತ್ರಿಯನ್ನೆಂದೂ ಮರೆಯುವಂತಿರಲಿಲ್ಲ; ಅಷ್ಟು ವ್ಯವಸ್ಥೆ ಮಾಡಿದ್ದ ಆತ. ಜತೆಗೆ ಆ ಹೆಣ್ಣು; ಇನ್ನೂ ಹದಿನೆಂಟರ ತರುಣಿ. ಅವಳನ್ನು ಕಂಡು ಪೂರ್ಣವಾಗಿ ಅವಳಿಗೆ ಸೋತರು. ಅವಳನ್ನಗಲಿ ಇರುವುದೇ ಸಾಧ್ಯವಿಲ್ಲ. ಅವಳೇ ಸರ್ವಸ್ವ; ಎಂದು ಅವರ ಮನ ಕೂಗಿ ಕೂಗಿ ಹೇಳುವಂತಾಯಿತು.

ಇಂದು ತಾನು ಗೆದ್ದೆ ಎಂದು ಇಲ್ಲದ ಮೀಸೆ ತಿರುವಿದ ಸುಬ್ಬ.

ಒಮ್ಮೆ ತುಳಿದ ದಾರಿ ಬಿಡಲು ರಾಯರು ಸಿದ್ಧರಾಗಲಿಲ್ಲ. ಅವಳನ್ನು ಬಿಡುವುದು ಅವರಿಗೆ ಅಸಾಧ್ಯವಾಯಿತು. ಮರುದಿನ . . . . ಮರುದಿನ . . . ಆಕೆ ರಾಯರ ನಿತ್ಯದ ಸೇವಕಿಯಾದಳು. ಗುರುಪುರ ಬಂಗ್ಲೆ-ಆಕೆಯ ಮನೆಯೇ ಆಗಿ ಪರಿಣಮಿಸಿತು. ತನ್ನ ತಮ್ಮನ ಸನ್ಯಾಸದ ಅರ್ಥ ಅವರಿಗಾಯಿತು-ಈಗ.

ರಾಯರ ಕಾರ್ಯರಂಗ ಅವರ ಪತ್ನಿಯ ಬೇನೆಯನ್ನು ಇನ್ನಷ್ಟು ಬೆಳೆಸಿತು. ತಾನು ಸದಾ ಹಾಸಿಗೆ ಹಿಡಿದುದರಿಂದಲೇ ಪತಿ ಈ ದಾರಿ ಹಿಡಿದರು ಎಂದು ಸಮಾಧಾನ ತಂದುಕೊಳ್ಳಲು ಅವರು ಯತ್ನಿಸುತ್ತಿದ್ದರು. ತಾನು ಗುಣಮುಖಳಾಗಿ ಅವರನ್ನು ಒಲಿಸಿಕೊಂಡು ಸರಿದಾರಿಗೆ ತರಬೇಕು ಎಂಬ ಭಾವ ಬೆಳೆದು ಬಂತು. ಹಾಸಿಗೆಯಿಂದೆದ್ದು ಅತ್ತಿತ್ತ ತಿರುಗಾಡುವಂತಾಯಿತು. ತಾನು ಆರೋಗ್ಯವಂತಳಾಗುತ್ತಿದ್ದೇನೆ, ಬೇಗನೇ ಬೇನೆ ವಾಸಿಯಾಗುತ್ತೆ ಎಂಬ ಆತ್ಮವಿಶ್ವಾಸ ಅವರಲ್ಲಿ ಬೆಳೆಯಿತು. ತಾನು ಚೆನ್ನಾಗಿದ್ದೇನೆ, ಇನ್ನೇನೂ ತೊಂದರೆ ಇಲ್ಲ ಎಂದು ತೋರಿಸಿಕೊಳ್ಳಲು ಯತ್ನಿಸಿದರು.

ಆದರೆ ರಾಯರು ಪುನಃ ಸಂಸಾರಿಯಾಗಿ ಹಿಂದಿನ ಜೀವನದ ಸುಖ ಅನುಭವಿಸುವ ಸ್ಥಿತಿಯನ್ನು ಮೀರಿ ನಿಂತಿದ್ದರು. ಆಕೆ-ಆ-ಹೆಣ್ಣು ಅವರ ಸರ್ವಸ್ವವಾಗಿದ್ದಳು. ಅವಳ ಸಂಪತ್ತು ಬೆಳೆಯಿತು, ಸ್ವಂತ ಮನೆಯಾಯಿತು, ಆಭರಣ ದೊರೆಯಿತು, ಆರೋಗ್ಯವೂ ಕೂಡಿ ನಿಂತಿತು. ರಾಯರ ವ್ಯಾಪಾರ ಇಳಿಮುಖವಾಗುತ್ತ ಬಂದು ಅರ್ಧ ಆಸ್ತಿಯನ್ನು ನುಂಗಿ ಕಣ್ಣು ಮುಚ್ಚಿತು. ಮ್ಯಾನೇಜರ್ ಅವರ ಬಂಡಸಾಲೆಗೆ ಬೀಗ ಹಾಕಿ, ಬೀಗದ ಕೈಯನ್ನು ರಾಯರಿಗೆ ಒಪ್ಪಿಸಿ ತಾನೇ ಸ್ವತಃ ವ್ಯಾಪಾರಕ್ಕೆ ಇಳಿದ. ಸುಬ್ರಾಯ ತಾನೇ ಸ್ವಂತ ಟ್ಯಾಕ್ಸಿ ಕೊಳ್ಳಬಹುದಾದಷ್ಟು ಹಣ ಕೂಡಿಸಿಕೊಂಡ. ಆದರೂ ರಾಯರನ್ನು ಬಿಟ್ಟಿರಲಿಲ್ಲ. ಒಂದು ಹಜ್ಜೆ ತಪ್ಪಿದ ರಾಯರು ಮತ್ತೊಂದು ಹಜ್ಜೆ ತಪ್ಪಿದರು. ಆರೋಗ್ಯವನ್ನು ಕೆಡಿಸಿಕೊಂಡರು-ಅವರ ಸಂಪತ್ತು ಕರಗಿತು, ಆರೋಗ್ಯ ಹೋಯಿತು, ವ್ಯಾಪಾರ ಉರುಳಿಬಿತ್ತು. ಇಂತಹ ಪರಿಸ್ಥಿತಿಯಲ್ಲಿ ಅವರಿಗಿದ್ದ ಗೆಳೆಯರು ಇಬ್ಬರೇ. ಸುಬ್ರಾಯ ಮತ್ತು ಆ ಹೆಣ್ಣು-ಕಾಮಾಕ್ಷಿ.

ರಾಯರು ಮಗು ವಿಮಲನೊಡನೆ ಹರಟೆ ನುಡಿಯುತ್ತ ಕುಳಿತ್ತಿದ್ದರು. ಮಗುವಿಗೆ ಆಗಲೇ ಎಂಟು ವರ್ಷವಾಗಿದೆ. ತನ್ನ ಆರೋಗ್ಯ ಆಗಾಗ ಕೆಡುತ್ತಿದ್ದುದರಿಂದ ಅವರಿಗೂ ಚಿಂತೆ ಹತ್ತಿತ್ತು. ಈ ಮಗುವನ್ನು ಕಂಡಾಗಲೆಲ್ಲ ಅದು ಅಧಿಕವಾಗಿತ್ತು. ಆ ಮಗುವಿಗಿಂತ ಬೇರೆ ಉತ್ತರಾಧಿಕಾರಿ ಅವರಿಗಿರಲಿಲ್ಲ. ಪತ್ನಿಯು ಚಿಂತೆಗೂ ಹೆಚ್ಚು ಅದರ ಉತ್ಕರ್ಷೆಯ ಯೋಚನೆ. ಅಂದು ಅವರಿಗೆ ಇನ್ನೂ ಒಂದು ಚಿಂತೆ ಬಾಧಿಸುತ್ತಿತ್ತು.

ಹತ್ತು ವರ್ಷಗಳ ಹಿಂದೆ, ತನ್ನ ಅತ್ಯಂತ ವೈಭವದ–ಸುಖದ–ಕಾಲದಲ್ಲಿ ಹೊರಟುಹೋಗಿದ್ದ ರಾಮು ಹಿಂತಿರುಗಿದ್ದ. ತನ್ನ ಪಾಲಿನ ಬಗೆಗೆ ಮಾತನಾಡಿದ. ಆದರೆ ಯಾವ ಪಾಲನ್ನು ಕೊಡಬೇಕು? ತನ್ನಿಂದ ಏನೂ ಸಾಧ್ಯವಿಲ್ಲೆಂದು ಅವರು ನುಡಿದುಬಿಟ್ಟರು.

ತಾನು ಹಾಗೆ ಮಾಡಿದ್ದು ಸರಿಯೇ ಎಂಬ ಚಿಂತೆ ಅವರನ್ನು ಪೀಡಿಸುತ್ತಿತ್ತು. ರಾಮು ಮರುಮಾತನಾಡದೆ, ಅತ್ತಿಗೆಯನ್ನು ಕಂಡು ಅವರ ಆಶೀರ್ವಾದ ಪಡೆದು ಹೊರಟುಹೋದ. ,ಆದರೆ . . . . ತಾನು ಮಾಡಿದ್ದು ಸರಿಯೇ? ಒಡಹುಟ್ಟಿದವನು ತನ್ನ ಹಕ್ಕಿನ ಪಾಲು ಕೇಳಿದ್ದಾನೆ ತಾಯಿಯಿಲ್ಲದ ತಬ್ಬಲಿ ಆತ . . . . . . ನಿಜ . . . . . . ಆದರೆ ಎಲ್ಲಿಂದ ಕೊಡಲಿ? ಏನನ್ನು ಕೊಡಲಿ? ಅವರಿಗೊಂದೂ ಅರ್ಥವಾಗಲಿಲ್ಲ. ಅರ್ಧಕ್ಕಿಂತಲೂ ಹೆಚ್ಚಾಗಿ ಆಸ್ತಿ ಕರಗಿಹೋಗಿದೆ. ಸಾಲವಂತೂ ದಿನೇ ದಿನೇ ಬೆಳೆಯುತ್ತಿದೆ. ಈ ಸಾಲ ತೀರಿಸಿ ಮಾನವಾಗಿ ಬಾಳುವುದು ಹೇಗೆ ಎಂಬ ಚಿಂತೆ ಅವರಿಗೆ ಬಿಡಿಸಲಾಗದ ಸಮಸ್ಯೆಯಾಗಿದೆ. ಈ ಯೋಚನೆಯ ಬಲೆಯೊಳಗೆ ನಿಲುಕಿದ ರಾಯಿತು, ಸಮಸ್ಯೆಗಳನ್ನೆಲ್ಲ ಮರೆಯಲೆಂದು ಮಗುವಿನೊಡನೆ ಆಟವಾಡುತ್ತ ಕುಳಿತ್ತಿದ್ದರು.

ಸುಬ್ರಾಯ ಕೋಣೆಯೊಳ ಹೊಕ್ಕ.

“ಈಗೊಂದು ಪ್ರಶ್ನೆ ಬಂದಿದೆ ಸುಬ್ಬ. ರಾಮು ಬಂದಿದ್ದ . . . . .

“ಗೊತ್ತಾಯಿತು ನನಗೂ ಸಿಕ್ಕಿದ. ಸಾವಿರ ಕತೆಹೇಳಿ ಊರನ್ನೆಲ್ಲ ದೂರಿ, ಅವನನ್ನು ಸಮಾಧಾನ ಪಡಿಸಿದೆ ರಾಯರೆ”

“ನಾನು ಮಾಡಿದ್ದು ಸರಿಯೇ”

“ತಪ್ಪೇನು ಬಂತು ರಾಯರೇ? ಈಗಲಾದರೂ ಬೇಕಾದರೆ ಅವನ ಆಸ್ತಿ ತೆಗೆದುಕೊಳ್ಳಲಿ. ಆಸ್ತಿಗಿರುವ ಸಾಲ ಮುಗಿಸಿದರೆ ತಾನೆ ಪಾಲು”

"ನಿಜ. ನನಗಂತೂ ಈ ಮಗುವಿನ ಚಿಂತೆ . . . . ."

"ಅವರ ಯೋಚನೆ ನಾನು ಮಾಡಿದ್ದೇನೆ"

"ಅಂದರೆ . . . . ."

"ಹತ್ತು ಸಾವಿರದ ವಿಮೆ; ಈ ಮನೆ"

"ಸರಿಯಾಗಿ ಹೇಳಿದೆ. ನನಗದು ಹೊಳೆಯಲೇ ಇಲ್ಲ. ನಾಳೆಯೇ ಆ ಬಗ್ಗೆ ವ್ಯವಸ್ಥೆ ಮಾಡಬೇಕು."

"ಸರಿ: ಅದಕ್ಕೇನು ಅವಸರ-ರಾಯರೇ?"

"ಹಾಗಲ್ಲ ಸುಬ್ಬು, ಎಚ್ಚರಿಕೆ . . . ."

ರಾಯರು ವಿಮಾ ಹಣವನ್ನೂ ಮನೆಯನ್ನೂ ಮಗುವಿನ ಹೆಸರಿಗೇ ಮಾಡಿದರು. ತಾನು ಮಗುವನ್ನು ಉದ್ಧಾರ ಮಾಡಿದೆಯೆಂದು ರಾಯರೇನೋ ನಲಿದರು. ಆದರೆ, ದಿನೇ ದಿನೇ ಬೆಳೆಯುತ್ತಿದ್ದ ಸಾಲ ಆ ಮನೆಯನ್ನೂ ನುಂಗಲಾರದೆಂಬ ಭರವಸೆ ಸುಬ್ಬನಿಗೆ ಮಾತ್ರ ಇರಲಿಲ್ಲ. ಆದರೂ ಆತ ಆ ಮಗುವಿನ ವಿಚಾರದಲ್ಲಿ ತುಂಬ ಆದರ ತೋರುತ್ತಿದ್ದ. ರಾಯರಿಗಿಂತ ಹೆಚ್ಚಾಗಿ ತಾನು ಅದರ ಉತ್ಕರ್ಷೆಯ ಭಾರ ಹೊತ್ತು ಆಗಲೇ ಮನೆಯಲ್ಲೇ ಶಿಕ್ಷಣದ ವ್ಯವಸ್ಥೆ ನಡೆಸಿದ.

ವಿಮಲ ಒಂಭತ್ತನೆ ವಯಸ್ಸಿಗೇ ಫಸ್ಟ್‌ಫಾರ್ಮ್ ಸೇರಿದಳು.

ರಾಯರು ಹಾಸಿಗೆ ಹಿಡಿದರು.

ಸೀತಮ್ಮ ಆರೋಗ್ಯವಂತರಾದರು.

---

# ಹನ್ನೊಂದು

ಹೊಸ ಬರೆಹಗಾರರು, ತರುಣ ಲೇಖಕರು ಎನ್ನುವವರಿಗೆ ನರಸಿಂಗರಾಯರ ಪರಿಚಯವಿಲ್ಲದಿಲ್ಲ. ಪಾಂಚಜನ್ಯ ಪತ್ರಿಕೆಯ 'ನಿಜವಾದ' ಸಂಪಾದಕರಾಗಿ ಕಳೆದ ಹತ್ತು ಹದಿನೈದು ವರ್ಷಗಳಿಂದ ದುಡಿಯುತ್ತಿದ್ದಾರೆ. ನಾಡಿನ ವಿವಿಧ ಬರೆಹಗಾರರನ್ನು ಬೆಳಕಿಗೆ ತರುವುದರಲ್ಲಿ ಅವರದು ಎತ್ತಿದ ಕೈ.

ಯಾವ ಲೇಖಕನೇ ಇರಲಿ, ಆತ ತನ್ನ ಹೆಸರಿನ ಕೊನೆಗೆ ಬಿ. ಎ., ಎಂ. ಎ. ಗಳನ್ನಾಗಲೀ ಪಂಡಿತರುಗಳನ್ನಾಗಲೀ ಹಾಕಿ ಲೇಖನಗಳನ್ನು ಕಳುಹಿಸಿದರೆ ಅದು ಪತ್ರಿಕೆಯಲ್ಲಿ ಪ್ರಕಟವಾಗುತ್ತದೆ ಎಂಬ ಬಗೆಗೆ ಸಂದೇಹವೇ ಇರಲಿಲ್ಲ. ಆ ಲೇಖನದಲ್ಲಿ ಏನಿದೆ, ಅದು ಯಾವುದರ ನಕಲು, ಅದು ಯೋಗ್ಯವಾಗಿದೆಯೋ ಇಲ್ಲವೋ ಎಂಬುದನ್ನು ಸಂಪಾದಕ ರಾದವರು ನೋಡುತ್ತಿರಲಿಲ್ಲ. ಆದರೆ ನರಸಿಂಗ ರಾಯರ ವಿಚಾರಧಾರೆ ಮಾತ್ರ ಇದಕ್ಕೆ ವಿರುದ್ಧವಾದುದು. ಆ ಪದವೀಧರರು ಪದವಿಗಳ ಹೆಸರಲ್ಲಿ ತಮ್ಮ ಲೇಖನಗಳನ್ನು ಪ್ರಕಟಿಸಲು ಬಯಸಿದಾಗ ಇವರ ಮುಂದೆ ಮಾತ್ರ ಪೂರ್ಣವಾಗಿ ಸೋಲುತ್ತಿದ್ದರು. ಅಂಥವರ ಲೇಖನ ಪ್ರಕಟವಾಗುವುದು ಖಚಿತವಾಗಿರಲಿಲ್ಲ ಎಂದರೂ ಸರಿಯೆ. ನರಸಿಂಗ ರಾಯರ ದೃಷ್ಟಿಯಲ್ಲಿ ಎಲ್ಲ ಲೇಖಕರೂ ಒಂದೇ. ಪದವೀಧರರ ಲೇಖನಗಳನ್ನು ಬದಿಗೆ ಸರಿಸಿ ಹೊಸ ಲೇಖಕರ ಬರಹಗಳನ್ನೆತ್ತಿ, ತಾಸುಗಟ್ಟಲೆಯಾಗಿ ಆ ಲೇಖನವನ್ನು ತಿದ್ದುವ ಕಾರ್ಯದಲ್ಲಿ ಕಳೆದು ಅದನ್ನೇ ಪ್ರಕಟಿಸುವ ಮನೋಧರ್ಮ ಅವರದು.

'ಹೊಸದಾಗಿ ಬರೆಯುತ್ತಿದ್ದಾನೆ. ಏನೋ ಕೊಂಚ ಸ್ವಾರಸ್ಯವಿದೆ' ಎಂದು ತಿಳಿದುಬಂದಾಗ ಅಂತಹ ಲೇಖಕನ ಬಗೆಗೆ ಅವರ ಅಭಿಮಾನ ಪ್ರೀತಿ ಅಧಿಕವಾಗುತ್ತಿತ್ತು. ಎಂತಲೇ ಕಿಟ್ಟು ಬರೆದ ಚುಟುಕು ಚೂರು ಗಳೂ, ನಗೆ ಬರಹಗಳೂ ಅವರ ಆದರಕ್ಕೆ ಪಾತ್ರವಾದುವು. ಅವುಗಳನ್ನೆಲ್ಲ ತಿದ್ದಿ, ಒಂದೊಂದಾಗಿ ಪ್ರಕಟಿಸುತ್ತ ಬಂದರು. ವಿದ್ಯಾರ್ಥಿಯಾಗಿದ್ದ ವನನ್ನು ಸಾಹಿತಿಯಾಗಿ ಮಾಡಿದರು.

ತನ್ನ ವಿದ್ಯಾಭ್ಯಾಸದ ಜತೆಗೆ ಕಿಟ್ಟು ಸಾಹಿತ್ಯದ ಸೇವೆಯನ್ನೂ ನಡೆಸಿ ಕೊಂಡು ಬಂದ. ಸಾಹಿತ್ಯ ಅವನಿಗೆ ವಿಶಿಷ್ಟವಾದ, ಜೀವನದಿಂದ ದೂರ ವಾದ ಅನುಭವವಲ್ಲ. ಸುತ್ತಲ ವಾತಾವರಣದ, ಜನಜೀವನದ, ಪ್ರಭಾವದ ಪ್ರತೀಕವಾಗಿ ತನ್ನ ಮನದಲ್ಲಿ ಉಂಟಾದ ಭಾವನೆಗಳು, ವಿಚಾರಧಾರೆ ಗಳನ್ನು ಲೇಖನವಾಗಿ ಕವಿತೆಯಾಗಿ ಹರಟೆಯಾಗಿ ಕತೆಯಾಗಿ ಬರೆದು ಎಸೆಯುತ್ತಿದ್ದ. ಆ ಬರವಣಿಗೆಗೆ ಅವನಿಗೆ ಅಭ್ಯಾಸ ಬೇಕಾಗಿರಲಿಲ್ಲ, ತಪಸ್ಸು ಅಗತ್ಯವಿರಲಿಲ್ಲ. ಕಲ್ಪನೆಯ ರಾಜ್ಯದಲ್ಲಿ ವಿಹರಿಸುವದಾದಲ್ಲಿ ಸಾಹಿತಿಯಾ ಗಲೀ ಕವಿಯಾಗಲಿ ಕಣ್ಣುಮುಚ್ಚಿ ಕುಳಿತು ಸಾಹಿತ್ಯವನ್ನು ರಚಿಸಬೇಕಾ

ಗುತ್ತೆ, ಕವಿತೆ ಕಟ್ಟಬೇಕಾಗುತ್ತೆ. ಆದರೆ ಈ ಕೃತ್ರಿಮ ಸಾಹಿತ್ಯ ಸೇವೆಯ ಅಗತ್ಯ ಅವನಿಗಿರಲಿಲ್ಲ. ತನ್ನ ಹೃದಯದ ಭಾವನಾವಿಕಾರಗಳನ್ನು ಬರೆದಿಡುವುದಷ್ಟೆ ಅವನ ಕೆಲಸ. ಆದು ಕೃತಕವಲ್ಲ, ನೈಜ ಚಿತ್ರ. ಕಾಣದ ಕಲ್ಪನೆಯ ಗಾಳಿಯಲ್ಲಿ, ಕಣ್ಣಮುಂದಿನ ನಗ್ನ ಚಿತ್ರ, ಸತ್ಯ ಚಿತ್ರ. ಪ್ರಕಟಣೆಗಾಗಿ ಅವನು ಸಾಹಿತ್ಯವನ್ನು ಕಟ್ಟಿಸುವ ಕೆಲಸಕ್ಕೆ ಇಳಿಯಬೇಕಾಗಿರಲಿಲ್ಲ. ಅವನು ಬರೆದ ಕೃತಿಗಳು, ಅವನ ಮಾಸ್ತರರ ಸೌಹಾರ್ದದಿಂದ, ಪಾಂಚಜನ್ಯ ಪತ್ರಿಕೆಯಲ್ಲಿ ಬರುತ್ತಿದ್ದುವು.

ಈ ಹುಡುಗ ತನ್ನ ಮನಸ್ಸಿಗೆ ಹೊಳೆದುದನ್ನು ತನ್ನ ಹೃದಯದಲ್ಲಿ ಕುದಿದ ವಿಚಾರಧಾರೆಯನ್ನು ಬರೆಯುತ್ತಾನೆ; ಬರೆಯುವುದಕ್ಕಾಗಿ ವಿಷಯ ಸಂಗ್ರಹ ಮಾಡುವವನಲ್ಲ'—ಎಂದು ನರಸಿಂಗರಾಯರೇ ಎಷ್ಟೋ ಬಾರಿ ಅವನ ಲೇಖನಗಳಿಗೆ ಪರಿಚಯ ಬರೆದಿದ್ದರು.

ಪಾಂಚಜನ್ಯದ ಓದುಗರಿಗೆ ಪರಿಚಿತನಾದ ಈ ಸಾಹಿತಿ ಇನ್ನೂ ವಿದ್ಯಾರ್ಥಿ, ಬೀಡಿ ಬೀಡಾ ವಿಕ್ರಯಿಸುವ ಹುಡುಗ ಎಂಬುದು ಯಾರಿಗೂ ತಿಳಿದಿರಲಿಲ್ಲ. ನರಸಿಂಹ ರಾಯರಿಗೆ ಮೊದಲು ಈ ಗುಟ್ಟನ್ನು ಮಾಸ್ತರರೂ ತಿಳಿಸಿರಲಿಲ್ಲ ಮುಂದೆ ಕ್ರಮವಾಗಿ ಅವನ ಲೇಖನಗಳು ಪ್ರಕಟವಾದಾಗ, ನರಸಿಂಗರಾಯರೂ ಹೊಗಳಿದಾಗ ಮಾಸ್ತರರು ಸತ್ಯವನ್ನು ತಿಳಿಸಿದರು. 'ಎಷ್ಟೋ ಎಮ್ಮೆ(ಎಂ.ಎ )ಗಳಿಗಿಂತ ಈ ಹುಡುಗ ವಾಸಿ–ಎಂದು ತನ್ನ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದರು.

ಕಿಟ್ಟು ನಾಲ್ಕನೇ ಫಾರ್ಮು ಮುಗಿಸಿದ. ಓದು, ಮನೆಕೆಲಸಗಳಿಂದಾಗಿ ಅವನಿಗೆ ಬಿಡುವೇ ದೊರೆಯುತ್ತಿರಲಿಲ್ಲ. ವ್ಯಾಪಾರ ಮಾಡುವುದನ್ನು ಅವನು ಬಿಡಲಿಲ್ಲವಾದರೂ ಅದರಿಂದ ಹೆಚ್ಚಿನ ಲಾಭ ದೊರೆಯದಾಯಿತು. ಬೇಸಿಗೆ ರಜೆಯ ಎರಡು ತಿಂಗಳಲ್ಲಿ ಸಾಧ್ಯವಾದಷ್ಟು ದುಡಿಯಬೇಕು. ಮುಂದೆ ಜೂನ್ ತಿಂಗಳಲ್ಲಿ ಓದು ಹೆಚ್ಚಾಗುತ್ತೆ, ಮಳೆಯಿಂದಾಗಿ ವ್ಯಾಪಾರವೂ ಕಠಿಣವಾಗುತ್ತೆ ಎಂದು ದುಡಿಯುತ್ತಿದ್ದ. ಈ ಸಮಸ್ಯೆಯನ್ನು ಅವನು ಅವನ ಉಪಾಧ್ಯಾಯರ ಮುಂದಿಟ್ಟಾಗ ಅವರೂ – 'ನೋಡೋಣ ಪ್ರಯತ್ನಿಸುತ್ತೇನೆ' ಎಂದಿದ್ದರು.

ಉಪಾಧ್ಯಾಯರು ಕಿಟ್ಟುವನ್ನು ಕರೆದುಕೊಂಡು ಪಾಂಚಜನ್ಯ ಪತ್ರಿಕೆಯ ಕಚೇರಿಗೆ ನಡೆದರು.

"ಇವನೇ ಸ್ವಾಮಿ, ಆ ಹುಡುಗ".

ಕುರ್ಚಿಯ ಮೇಲೆ ಪದ್ಮಾಸನ ಹಾಕಿಕೊಂಡು ಕುಳಿತು, ಮುಂದಿನ ಮೇಜಿನ ಮೇಲೆ ತಲೆ ತಗ್ಗಿಸಿ ಏನನ್ನೋ ಬರೆಯುತ್ತಿದ್ದ ನರಸಿಂಗರಾಯರು ತಲೆ ಎತ್ತಿದರು. ತನ್ನ ಕನ್ನಡಕವನ್ನು ಕೆಳಗಿರಿಸಿ ಕಣ್ಣುಜ್ಜಿ ಕುಳಿತುಕೊಳ್ಳಿ ಎಂದು ಸಂಜ್ಞೆಮಾಡಿದರು. ಉಪಾಧ್ಯಾಯರೂ ಕಿಟ್ಟುವೂ ಪಕ್ಕ ದಲ್ಲೇ ಕುಳಿತುಕೊಂಡರು. ಮಗ್ಗುಲಿನ ಕಿಟಕಿಯ ಬಾಗಿಲು ಸರಿಸಿ ಬಾಯಿ ತುಂಬ ತುಂಬಿದ್ದ ವೀಳ್ಯವನ್ನು ಹೊರಕ್ಕುಗುಳಿ ನರಸಿಂಗರಾಯರು ಮಾತಿಗೆ ಸಿದ್ಧರಾದರು.

"ಮೈದಾನಿನಲ್ಲಿ ನಿನ್ನನ್ನು ನೋಡಿಲ್ಲವೇ ನಾನು?"

"ನೋಡಿದ್ದೀರಿ ಸ್ವಾಮಿ. ಬೀಡಿ ಬೀಡಾ ಮಾರಾಟ ಮಾಡುವ ಹುಡುಗ ನಾನು."

"ಸರಿ . . . . ಯಾವ ಕ್ಲಾಸು ಈಗ . . . . ?"

"ಮುಂದೆ ಐದನೇ ಫಾರ್ಮು"

"ಅದಕ್ಕೆ ತಮ್ಮ ಕಡೆಗೆ ಬಂದಿದ್ದೇವೆ. ಮುಂದೆ ವ್ಯಾಪಾರ ಮಾಡಿ ಓದು ನಡೆಸುವುದು ಕಷ್ಟವಾಗುತ್ತೆ. ತಾವು ಏನಾದರೂ ದಾರಿ ತೋರಿಸ ಬೇಕು" ಎಂದರು ಮಾಸ್ತರರು.

"ಒಂದು ಕೆಲಸ ಮಾಡು. ನಗರದಲ್ಲಿ ಸಭೆ, ಅಪಘಾತ ಮುಂತಾದವುಗಳಾದರೂ,–ವರದಿ ಬರೆದು ಕಳುಹಿಸು. ನಮ್ಮ ನಗರದ ಪ್ರತಿನಿಧಿ ಯಾಗಿ ಕೆಲಸಮಾಡು.

"ಆಗಲಿ . . . . "

"ನಿನ್ನ ಸ್ಕೂಲಿಗೂ ಅಡ್ಡಿಯಾಗುವುದಿಲ್ಲ. ಸಭೆ, ಭಾಷಣಗಳೆಲ್ಲ ಸಂಜೆ ಹೊತ್ತೇ ನಡೆಯುತ್ತವೆ."

"ಹ್ಞೂ . . . . "

"ನಾಳೆಯಿಂದ ವಿದ್ಯಾರ್ಥಿಗಳ ಸಮ್ಮೇಳನವಿದೆ. ಅದರ ಪೂರ್ಣ ವರದಿ ಮಾಡು. ದೀರ್ಘವಾಗೇ ಇರಲಿ"

ಸಲಹೆಗಳನ್ನು ಪಡೆದು ಕಿಟ್ಟು ಮತ್ತು ಮಾಸ್ತರರು ಹೊರಡಲು ನಿಂತರು. ಚಹಾ ಬಂತು. ಅದನ್ನು ಕುಡಿಯುತ್ತಿದ್ದಾಗ ಮ್ಯಾನೇಜರರು ನಾಲ್ಕಾರು ವಿಸಿಟಿಂಗ್ ಕಾರ್ಡುಗಳನ್ನು ತಂದು ಕಿಟ್ಟುವಿನ ಕೈಗಿತ್ತರು.

ಇಬ್ಬರೂ ನರಸಿಂಗರಾಯರನ್ನು ವಂದಿಸಿ ಹೊರಟರು. ರಾಯರು ಪುನಃ ಬರೆಯಲು ತೊಡಗಿದರು!

"ತಿಂಗಳಿಗೆ ಹತ್ತು ರೂಪಾಯಿಯಾದರೂ ಸಿಗಬಹುದು. ನಿನ್ನ ಸಮಸ್ಯೆ ಬಗೆ ಹರಿದಂತಾಯಿತು. ಇನ್ನೊಂದು ಹತ್ತು ರೂಪಾಯಿ ಬೇರೆ ಸಂಗ್ರಹಿಸೋಣ" ಎಂದು ಮಾಸ್ತರರು ಸಮಾಧಾನ ಹೇಳಿ ಕಿಟ್ಟುವಿನ ಸಮಸ್ಯೆ ಬಗೆ ಹರಿಸಿದರು. ಅವನ ತೂಗಾಡುವ ಅಂಗಡಿಗೆ ವಿಶ್ರಾಂತಿ ದೊರೆತು, ಅದು ಮನೆಯಲ್ಲೇ ಉಳಿಯಿತು.

ಬೊಕ್ಕಪಟ್ಣದ ಜನರ ಆದರಕ್ಕೆ ಪಾತ್ರರಾದ ರಾಮಯ್ಯ ತನ್ನ ರಾಮಾಯಣ—ಭಾರತ ವಾಚನವನ್ನು ನಡೆಸಿಕೊಂಡು ಬರುತ್ತಿದ್ದರು. ರಾಮನವಮಿ, ಮುಂತಾದ ಶುಭ ದಿನಗಳಲ್ಲಿ ಅವರು ಸಂಪೂರ್ಣ ರಾಮಾಯಣವನ್ನೋ ಸಂಪೂರ್ಣ ಭಾಗವತವನ್ನೋ ವಾಚಿಸುತ್ತಿದ್ದರು. ಕಿಟ್ಟು ತನಗೆ ಬಿಡುವಾದಾಗ, ನಗರದಲ್ಲಿ ಯಾವ ಕಾರ್ಯಕ್ರಮವೂ ಇಲ್ಲದಾಗ ಮನೆಯಲ್ಲೇ ಕುಳಿತು ತನ್ನ ಓದು ಸಾಗಿಸುತ್ತಿದ್ದ. ಜನ ಅವನನ್ನೂ ಸುಮ್ಮನಿರಗೊಡುತ್ತಿರಲಿಲ್ಲ. ಆ ರಶೀದಿ, ಈ ನೋಟು, ಆ ನೋಟೀಸಿಗೆ ಉತ್ತರ, ಈ ಬಾಡಿಗೆ ಚೀಟು ಎಂದು ಅವನನ್ನು ಪೀಡಿಸಿ ಕೆಲಸ ಮಾಡಿಸಿಕೊಳ್ಳುತ್ತಿದ್ದರು. ಮನಿಆರ್ಡರ್ ಫಾರ್ಮು, ಅರ್ಜಿ, ಏನೇ ಇರಲಿ ಎಲ್ಲಕ್ಕೂ ಜನ ಅವನ ಬಳಿಗೆ ಬರುತ್ತಿದ್ದರು. ಬರಬರುತ್ತ ಪ್ರತಿಯೊಂದು ವಿಚಾರದಲ್ಲೂ ಜನ ಅವಗೆ ಸಲಹೆ ಕೇಳಲಾರಂಭಿಸಿ ಅವನನ್ನು ಬೀದಿಯ ದೀಪವಾಗಿ ಮಾಡಿಕೊಂಡರು ತಮ್ಮ ನಿತ್ಯ ಜೀವನದಲ್ಲಿ.

ಪಾಂಚಜನ್ಯ ಪತ್ರಿಕೆಯಿಂದ ತಿಂಗಳಿಗೆ ೧೫ ಬರುತ್ತಿತ್ತು. ಬೇರೆ ಹತ್ತು ಹನ್ನೆರಡು ರೂಪಾಯಿ ವಿದ್ಯಾಭ್ಯಾಸದ ಬಗೆಗೆ ಸಹಾಯವಾಗಿ ದೊರೆಯುತ್ತಿತ್ತು. ಕಿಟ್ಟು ಮತ್ತು ರಾಮಯ್ಯನ ಜೀವನ ಸುಗಮವಾಗಿ ಸಾಗುತ್ತಿತ್ತು. ಜನತೆಯ ವಿಶ್ವಾಸ ಆದರಗಳನ್ನು ಸಂಪಾದಿಸಿ, ಬೊಕ್ಕಪಟ್ಣದ ಮಕ್ಕಳಿಂದ ಮುದುಕರ ವರೆಗೆ ಎಲ್ಲರಿಂದಲೂ 'ಕಿಟ್ಟಣ್ಣ ಕಿಟ್ಟಣ್ಣ' ಎನ್ನಿಸಿಕೊಂಡು ಕಿಟ್ಟು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಪ್ರಥಮಸ್ಥಾನ ಗಳಿಸಿ ತೇರ್ಗಡೆಯಾದ.

ತಾನು ಮ್ಯಾಟ್ರಿಕ್ ಪಾಸಾದ ಶುಭ ಸಮಾಚಾರ ತಿಳಿಸಲು ಅಂತೋನಿ ಮನೆಗೆ ಆ ದಿನವೇ ಕಿಟ್ಟು ತೆರಳಿದ. ತನ್ನ ಮಗನ ಪ್ರತಿಭೆ

ಯನ್ನು ಕಂಡು ಐಲೀನಾ ಹಿಗ್ಗಿ ನಲಿದಳು. ಆಗಲೇ ಹನ್ನೆರಡು ಹದಿ ಮೂರನೇ ವರ್ಷದಲ್ಲಿ ಕಾಲಿಟ್ಟ ರೂಬಿ ಹರ್ಷಿತಳಾದಳು. ಅಂತೋನಿ ಅವನನ್ನು ತುಂಬ ಅಭಿಮಾನದಿಂದ ಕಂಡು, ಕಾಫಿ ತಿಂಡಿ ಕೊಟ್ಟ. ಐಲೀನಾ ಅವನಿಗೆ ಒಂದು ಜತೆ ಪಂಚೆ, ಶರ್ಟುಗಳನ್ನು ಕೊಟ್ಟು ಹರಸಿ ದಳು. ಮನೆಯಲ್ಲಿ ಅಡುಗೆ ಮಾಡಿಟ್ಟು ಪರೀಕ್ಷೆ ಫಲಿತಾಂಶ ನೋಡಲು ಹೋಗಿದ್ದ ಕಿಟ್ಟು ಶಾಲೆಯಿಂದ ನೇರವಾಗಿ ಅಂತೋನಿಯ ಮನೆಗೇ ತೆರಳಿದ್ದ. ಅಲ್ಲೇ ಮಧ್ಯಾಹ್ನ ಊಟವೂ ಆಯಿತು. ಐಲೀನಾ ತನ್ನ ಮಗನ ಬಗೆಗೆ ತುಂಬಿದ ಹರ್ಷದಿಂದ ಮೂಕಳಾದಳು; ಏನು ಆಡಲಿ ಏನು ಬಿಡಲಿ ಎಂಬುದೇ ಅವಳಿಗೆ ತೋರಲಿಲ್ಲ.

ಗಂಟೆ ನಾಲ್ಕಾಯಿತು. ತಾನು ಹೊರಡುತ್ತೇನೆ ಎಂದು ಕಿಟ್ಟು ಹೊರಟ. ಬಲ್ಮಠದ ಮಾರ್ಗವಾಗಿ ಹಂಪನಕಟ್ಟೆ ಕಡೆಗೆ ಆತ ನಡೆದು ಬರುತ್ತಿದ್ದ. ಸರಕಾರೀ ಟ್ರೈನಿಂಗ್ ಸ್ಕೂಲ್ ಬಳಿ ಬರುತ್ತಿದ್ದಂತೆ ಮಳೆ ಆರಂಭವಾಯಿತು. ಈ ಮಳೆಗೆ ಒದ್ದೆಯಾಗಬಾರದೆಂದು ಅಲ್ಲೇ ಮಗ್ಗು ಲಿಗೆ ಇದ್ದ ಅಂಗಡಿಗಳ ಸಾಲಿನ ಜಗುಲಿ ಮೇಲೆ ಆತ ನಿಂತುಕೊಂಡ. ಅಲ್ಲಿ ಕೊನೆಯ ಅಂಗಡಿಯೊಂದರ ಬಾಗಿಲು ತೆರೆದಿರಲಿಲ್ಲ. ಕಿಟ್ಟು ಅಲ್ಲೇ ನಿಂತಿದ್ದ. ಹಂಪನಕಟ್ಟೆಯ ಕಡೆಯಿಂದ ಯಾರೋ ಒಂದಿಬ್ಬರು ಹುಡುಗಿ ಯರು ಬರುತ್ತಿದ್ದವರೂ ಮಳೆಗೆ ಹೆದರಿ ಆ ಜಗಲಿ ಏರಿದರು.

ಐದು ತಾಸಾಯಿತು, ಐದೂವರೆಯೂ ಆಯಿತು. ಮಳೆ ಒಂದೇ ಸವನೆ ಬರುತ್ತಲೇ ಇತ್ತು. ಜೂನ್ ಮೊದಲ ವಾರ; ಮಳೆ ಇನ್ನೂ ಆರಂಭವಾಗಿತ್ತಷ್ಟೆ. ಆದರೆ, ಈ ಮಂಗಳೂರು ಮಳೆ ಬರುವುದೇ ಅಪ ರೂಪ. ಬಂದರೆ, ಹೊರಡಲು ನಿರಾಕರಿಸುತ್ತಿತ್ತು. ಆ ದಿನ ಅದೇಕೋ ಹೊರಟು ಹೋಗಲು ಮನಸ್ಸೆ ಬರಲಿಲ್ಲ. ಅಂಗಡಿಗಳ ಮುಂದೆ ಇನ್ನೂ ಹತ್ತಾರು ಮಂದಿ ನಿಂತಿದ್ದರು. ಜತೆಗೆ ಮಳೆಗೆ ಒದ್ದೆಯಾಗಿ ನಡುಗುತ್ತಿದ್ದ ನಾಯಿಯೊಂದು ಬೇರೆ.

ಗಂಟೆ ಒಂದಾಯಿತು—ಒಂದೂವರೆಯಾಯಿತು. ಆದರೂ ಕಿಟ್ಟು ಮೌನವಾಗೇ ಇದ್ದ. ಆ ಇಬ್ಬರು ಬಾಲಕಿಯರು ತಮ್ಮೊಳಗೇ ಮಾತ ನಾಡುತ್ತಿದ್ದರು; ಆಗೊಮ್ಮೆ ಈಗೊಮ್ಮೆ ಮಳೆಯನ್ನು ಶಪಿಸುತ್ತಿದ್ದರು. ಉಸಿರು ಬಿಗಿಹಿಡಿದು ನಿಂತು ಕಿಟ್ಟುವಿಗೂ ಬೇಸರವಾಗಿತ್ತು. ಆತ ಮಾತು

ಆರಂಭಿಸಿದ.

"ಯಾವ ಸ್ಕೂಲು ನಿಮ್ಮದು?"

"ಮಿಲಾಗ್ರಿಸ್ ಹತ್ತಿರ . . . . "

"ತಿಳಿಯಿತು. ಕೊಡೆ ತರಲಿಲ್ಲ . . . . "

"ಮಳೆಯ ಸುಳಿವೇ ಇರಲಿಲ್ಲ. ಆದರೆ, ಎಲ್ಲಿಂದಲೋ ಬಂದು ಬಿಟ್ಟಿದೆ ಈಗ"

"ಮನೆ . . . . "

"ಕದ್ರಿಯಲ್ಲಿ ಶಾಸ್ತ್ರಿಗಳ ಮನೆಹತ್ತಿರ."

"ಯಾವ ಕ್ಲಾಸೊ . . . . . . "

"ನಾನು ನಾಲ್ಕನೇ ಫಾರ್ಮು, ಈಕೆ ಮೂರನೇ ಫಾರ್ಮು" ಎಂದಳು ಪ್ರಾಯದಲ್ಲಿ ಎಳೆಯುವಳಂತೆ ಕಂಡರೂ ಸುಂದರಿಯಾದ ಹುಡುಗಿ.

"ಕಾನ್ವೆಂಟಿಗೆ ಹೋಗಲಿಲ್ಲವೇಕೆ?"

ಅಲ್ಲಿ ಹತ್ತಿರ ಮನೆಯಿತ್ತು. ಇತ್ತ ಬಂದು ಕೆಲವು ಕಾಲ ಆಯಿತಷ್ಟೆ."

"ನೀವು . . . . . ಎಂದಳು ಇನ್ನೊಬ್ಬಳು."

"ಮ್ಯಾಟ್ರಿಕ್ ಆಯಿತು. ಬೊಕ್ಕಪಟ್ಣದಲ್ಲಿ ಮನೆ."

"ಹೆಸರು . . . . . "

"ಕೃಷ್ಣ ರಾವ್ . . . . ಅಥವಾ . . . . . ನಂದಕುಮಾರ್"

"ಅಂದರೆ . . . . . "

"ಒಂದು ನಿಜವಾದ ಹೆಸರು, ಇನ್ನೊಂದು ಪತ್ರಿಕೆಯವರು ಕೊಟ್ಟ ಹೆಸರು."

ಆ ಬಾಲಕಿಯರು ತಮ್ಮೊಳಗೆ ಏನೋ ಪಿಸುಮಾತು ಆರಂಭಿಸಿದರು. ಕಿಟ್ಟುವಿಗೆ ಅರ್ಥವಾಗಲಿಲ್ಲ.

"ಏನು ವಿಷಯ . . . . . ?"

"ಪಾಂಚಜನ್ಯ ಪತ್ರಿಕೆಯಲ್ಲಿ ನಿಮ್ಮ ಲೇಖನ ಓದಿದ್ದೇವೆ . . . . . . . ಅವರೇ . . . . . "

"ಹೌದು . . . . . . "

ಹುಡುಗಿಯರು ಸುಮ್ಮನಾಗಿ ಕೆಲಹೊತ್ತು ಕಿಟ್ಟುವಿನ ಮುಖವನ್ನೇ

ನೋಡತೊಡಗಿದರು. ಆ ಸುಂದರಳಾದ ಬಾಲಕಿ ಮೇಲಿಂದ ಮೇಲೆ ಆತನ ಕಡೆಗೇ ನೋಡುತ್ತಿದ್ದಳು. ಆ ನೋಟ ಕಿಟ್ಟುವನ್ನು ಪುನಃ ಮಾತನಾಡುವಂತೆ ಮಾಡಿತು.

"ಯಾಕಮ್ಮ ಹಾಗೆ ನೋಡುತ್ತಿ?"

ಆಕೆ ನಾಚುಕೆಯಿಂದ ತಲೆತಗ್ಗಿಸಿದಳು.

"ನಿನ್ನ ತಂದೆ . . . . ."

"ತಂದೆ ತೀರಿಕೊಂಡರು. ತಾಯಿ ಇದ್ದಾರೆ. ಇವರಿಬ್ಬರೂ ಈಗ ನಮ್ಮ ಮನೆಯಲ್ಲೇ ಬಿಡಾರ ಮಾಡಿದ್ದಾರೆ . . . . . . . ಈಕೆಯ ತಂದೆಯ ಹೆಸರು ಕೇಳಿರಬಹುದೋ ಏನೋ . . . . ವೆಂಕಟ್ರಾಯರು ಅಂತ . . . . ಸಾಹುಕಾರರಾಗಿದ್ದರು . . . . . . ." ಎಂದಳು ಇನ್ನೊಬ್ಬಾಕೆ.

"ಹ್ಞೂ . . . . ಹೆಸರು ಕೇಳಿದ ನೆನಪು . . . . ."

"ಅವರು ತುಂಬ ಧನಿಕರಾಗಿದ್ದರು. ಆದರೆ ಈಕೆ ಪಾಪ ಬಡವೆ."

"ಪಾಪ . . . . ."

"ಸುಮ್ಮನಿರೇ . . . . . . . ಅದನ್ನೂ ಅವರು ಕತೆ ಬರೆದಾರು" ಎಂದಳು ಆಕೆ.

ಮಳೆ ಕಡಿಮೆಯಾಗಿ ಅಲ್ಲೊಂದು ಇಲ್ಲೊಂದು ಕಂಡೂ ಕಾಣದ ಹನಿಗಳು ಮಾತ್ರ ಬೀಳತೊಡಗಿದವು. ಕಿಟ್ಟು ಅವರಿಬ್ಬರನ್ನೂ ಬೀಳ್ಕೊಟ್ಟು ಹೊರಟ. ಅವರೂ ಅವನೆಡೆಗೆ ನೋಡುತ್ತ ತಮ್ಮ ಮನೆಯೆಡೆ ನಡೆದರು.

ಆ ಬಾಲಕಿಯ ಸೌಂದರ್ಯವೆಷ್ಟು ಕಿಟ್ಟುವನ್ನು ಸೆಳೆದಿತ್ತೋ ಅಷ್ಟೇ ಅವಳ ಕತೆಯೂ ಅವನಲ್ಲಿ ಕುತೂಹಲವನ್ನು ಕೆರಳಿಸಿತ್ತು. ವೆಂಕಟ್ರಾಯರ ಕತೆ ಅವನೂ ಕೇಳಿದ್ದ. ಸಾಹುಕಾರರಾಗಿದ್ದವರು ದಿವಾಳಿಯಾಗಿ ರೋಗಪೀಡಿತರಾಗಿ ಮೃತರಾದ ಕತೆ ಅವನ ಪತ್ರಿಕೆಯಲ್ಲೇ ಪ್ರಕಟವಾಗಿತ್ತು. ಅವರಿಗೊಬ್ಬ ಮಗಳೂ ಪತ್ನಿಯೂ ಇದ್ದಾರೆ; ದುಃಖಸಹಿಸಲು ಅವರಿಗೆ ದೇವರು ಶಕ್ತಿಕೊಡಲಿ ಎಂದು ಅವನೇ ಬರೆದಿದ್ದ ನೆನಪು. ಆ ಹಳೆಯ ವಾರ್ತೆ, ಜನರು ಆಡುತ್ತಿದ್ದ ಮಾತುಗಳೆಲ್ಲ ಪುನಃ ನೆನಪಿಗೆ ಬಂದುವು. ರಾಯರ ವೈಭವಯುಕ್ತ ಜೀವನದ ಬಗೆಗೂ ಆತ ಕೇಳಿದ್ದ. ಅಂತಹರ ಮಗಳು ಇಂದು ಬಡತನದ ಬಾಳು ನಡೆಸುತ್ತಿದ್ದಾಳೆ. ನೈತಿಕ ಶಕ್ತಿಯಿಲ್ಲದ ಆರ್ಥಿಕ ಶಕ್ತಿ ಎಷ್ಟು ಕ್ಷಣಿಕ ಎಂಬುದನ್ನಾತ ತೂಗಿ

ನೋಡುತ್ತ ಮನೆ ತಲುಪಿದ.

ತಾತ ಕಿಟ್ಟುವಿನ ದಾರಿಯನ್ನೇ ಕಾಯುತ್ತಿದ್ದರು. ತನ್ನ ಮೊಮ್ಮಗ ಫಲಿತಾಂಶ ಹೇಳಲು ಏಕೆ ಬಂದಿಲ್ಲ, ಏನಾಯಿತು ಎಂದೆಲ್ಲ ಸಾವಿರ ಬಗೆಯಾಗಿ ಯೋಚಿಸಿ ಅವರು ಭೀತರಾಗಿದ್ದರು. ಅವನನ್ನು ಕಂಡು ಅವರ ಮನಸ್ಸು ಶಾಂತವಾಯಿತು ನೂರು ವರ್ಷ ಬಾಳು ಎಂದು ಆಶೀರ್ವದಿಸಿದರು. ಅವರು ಪ್ರಶ್ನಿಸುವ ಮೊದಲೇ ತಾನು ಪಾಸಾಗಿದ್ದೇನೆ ಎಂದು ಕಿಟ್ಟು ಶುಭನುಡಿದ ತಾನು ತಾಯಿಗೆ ಈ ಸುದ್ದಿ ತಿಳಿಸಲು ಹೋಗಿದ್ದೆ ಎಂದ.

'ತಾಯಿಯನ್ನು ಮರೆಯಲಿಲ್ಲ. ತಾತನಿಗೆ ಆ ಮೇಲೆ ಹೇಳಿದರಾಯಿತೆಂದು ಅಲ್ಲಿ ಹೋದೆ'–ಎಂದು ತಾತ ನಕ್ಕುಬಿಟ್ಟರು. ಐಲೀನಾ ವಿಚಾರ ತಿಳಿದು ಅವರಿಗೆ ಆನಂದವಾಯಿತು. ತನ್ನ ಕನಸು ನಿಜವಾಯಿತು, ಮೊಮ್ಮಗ ತನಗೆ ಊರುಗೋಲಾದ ಎಂದು ತಾತ ಹಿಗ್ಗಿದರು.

ತಾತನ ತೃಪ್ತಿ ಬಹಳ ಕಾಲ ಉಳಿಯಲಿಲ್ಲ. ಗಾಂಧೀಜಿಯ ಕರೆಯಿಂದ ಆಗಲೇ ಜಾಗೃತವಾಗಿ ಮುನ್ನಡೆಯುತ್ತಿದ್ದ ಭಾರತದ ಯುವಜನತೆಯೊಡನೆ ಕಿಟ್ಟು ಸೇರಿಕೊಂಡ. ತನ್ನ ಪತ್ರಿಕೆಗೆ ಸತ್ಯಾಗ್ರಹದ ಸುದ್ದಿಗಳನ್ನು ಕೊಡುವ ಕೆಲಸ ನಡೆಸುತ್ತಿದ್ದರೂ ತನ್ನಿಂದಾದ ಹೋರಾಟ ಸಾಗಿಸದಿರಲು ಅವನಿಂದ ಸಾಧ್ಯವಾಗಲಿಲ್ಲ. 'ಸತ್ಯಾಗ್ರಹ' ಪತ್ರಿಕೆ ಅವನ ಮತ್ತು ಅವನ ಗೆಳೆಯರ ಸಾಹಸದ ಫಲವಾಗಿ ಹೊರಬೀಳಲಾರಂಭಿಸಿತು. ತಾನೇ ಸಂಪಾದಕನಾಗಿ, ಲೇಖಕನಾಗಿ, ಮುದ್ರಕನಾಗಿ ಕಿಟ್ಟು ಕೆಲಸ ಮಾಡಿದ. ಸೈಕ್ಲೋಸ್ಟೈಲ್ ಯಂತ್ರ ಬಿಡುವಿಲ್ಲದೆ ದುಡಿಯಿತು. ಯಂತ್ರದ ಬೆನ್ನು ಹತ್ತಲು ನಡೆಸಿದ ಪೋಲೀಸರ ಯತ್ನಗಳೆಲ್ಲ ವಿಫಲವಾದುವು. ಇಂದು ಬೊಕ್ಕಪಟ್ನ, ನಾಳೆ ಕದ್ರಿ ಬೆಟ್ಟ, ನಾಡಿದ್ದು ಬೆಂಗರೆ ಎಂದು ದಿನಕ್ಕೊಂದು ಕಡೆಯಿಂದ ಪತ್ರಿಕೆ ಪ್ರಕಟವಾಗುತಿತ್ತು ಪಾಂಡೇಶ್ವರ ದೇವಸ್ಥಾನದೊಳಗೆ ಬಹಳ ಕಾಲ ಪತ್ರಿಕೆ ಮುದ್ರಿತವಾಯಿತು. ಯಂತ್ರ ಹುಡುಕಲು ಬಂದ ಪೋಲೀಸರ ಕಣ್ಣು ತಪ್ಪಿಸಿ ತರಗೆಲೆ ರಾಶಿಯಲ್ಲಿ ಅವಿತುಕೊಂಡಿತು. ಅಂತೂ ಸೈಕ್ಲೋಸ್ಟೈಲ್ ಯಂತ್ರ ಮಾತ್ರ ಪೋಲೀಸರಿಗೆ ಸಿಗಲಿಲ್ಲ; ಪತ್ರಿಕೆಯ ಪ್ರಕಟಣೆ ನಿಲ್ಲಲಿಲ್ಲ.

ಪತ್ರಿಕೆಯ ಹಂಚೋಣದಲ್ಲಿ ಕಿಟ್ಟು ಅನೇಕ ವೇಳೆ ಪೋಲೀಸರ

ಹಿಂಸೆಗಳಿಗೆ ಗುರಿಯಾದ. ಇನ್ನೂ ಪ್ರಾಯ ಬಾರದ ಬಾಲಕ ಎಂಬುದರಿಂದ ಅವನ ಸೆರೆ ಮಾತ್ರ ನಡೆಯಲಿಲ್ಲ. ಆದರೆ ಸೆರೆಮನೆಯಲ್ಲಿ ದೊರೆಯುದ ಲಾಥಿ ಏಟುಗಳು ಪ್ರತಿನಿತ್ಯ ಎಂಬಂತೆ ಅವನಿಗೆ ದೊರೆತುವು. ತನ್ನ ಹೋರಾಟದಲ್ಲಿ ಆತ ಯಾರಿಗೂ ಹಿಂದಾಗದೆ ದುಡಿದ.

ಮೂಳೆ ಮುರಿಸಿಕೊಂಡು ಕೆಲದಿನ ಮೂಲೆಯಲ್ಲಿ ಕುಳಿತು ಪುನಃ ಏಟಿಗೆ ಬೆನ್ನು ತಲೆ ಕೊಟ್ಟು ಹೋರಾಡುವುದೇ ಅವನ ಅಭ್ಯಾಸವಾಯಿತು. ವಿಧ್ಯಾರ್ಥಿನಿಯರ ಸೆರಗು ಹಿಡಿದೆಳೆದು ಅಪಮಾನ ಪಡಿಸಿದ ರೀತಿ; ಪ್ರೊಫೆಸರ್ ರಾಮರಾಯರನ್ನು ಹೊಡೆದು ಚರಂಡಿಗೆ ತಳ್ಳಿ ಪೋಲೀಸರು ಒದ್ದು ನಗುತ್ತಿದ್ದ ಚಿತ್ರ; ವಿದ್ಯಾರ್ಥಿಗಳು ತಲೆಯೊಡೆದು ಮೈದಾನಿನಲ್ಲಿ ಬಿದ್ದ ದೃಶ್ಯಗಳು ಒಂದೊಂದಾಗಿ ಅವನ ಜೀವನವನ್ನು ಬದಲಿಸಿದುವು. ಮಾನವ ಹೋರಾಡಬೇಕು, ಬಂದ ಆತಂಕಗಳನ್ನು ಇದಿರಿಸಿ–ಮುನ್ನಡೆದರೆ ಸಾಲದು, ಬರಬಹುದಾದ ಆತಂಕಗಳನ್ನು ಇದಿರಿಸಲು ಸಿದ್ಧನಾಗೇ ನಿಂತಿರಬೇಕು ಎಂಬುದನ್ನಾತ ಅರಿತ. ಹೋರಾಟ ಅನಂತ, ಅದು ನಿತ್ಯ. ಇಂದು ಹೋರಾಡಿ ನಾಳೆ ಸುಮ್ಮನಾದರೆ ಅದರಿಂದ ಯಾವ ಪುರುಷಾರ್ಥವೂ ಸಾಧಿತವಾಗದು ಎಂಬುದನ್ನಾತ ಮನಗಂಡು ದಿನನಿತ್ಯ ಒಂದಲ್ಲ ಒಂದು ಬಗೆಯಿಂದ ಹೋರಾಡಿದ.

ಆದರೆ, ಸತ್ಯಾಗ್ರಹ ಸಮರ ಆರಂಭವಾದಷ್ಟೆ ಅನಿರೀಕ್ಷಿತವಾಗಿ ಅಂತ್ಯವಾಯಿತು. ಸತ್ತವರು ಸತ್ತರು, ನರಳಿದವರು ನರಳಿದರು. ನಕ್ಕವರು ನಲಿದರು! ನಾವು ಒಂದು ಹಜ್ಜೆ ಮುನ್ನಡೆದೆವು, ನಾವಿನ್ನೂ ಅಹಿಂಸಾತ್ಮಕವಾಗಿ ಹೋರಾಡಲು ಶಕ್ತರಾಗಿಲ್ಲ, ನಮ್ಮ ಹೋರಾಟ ಇನ್ನೂ ಪವಿತ್ರವಾಗಬೇಕು ಎಂದೆನೇನೋ ನಾಯಕರು ಹೇಳಿದರು. ಸಂಧಾನದ, ದುಂಡು ಮೇಜಿನ ನಾಟಕಗಳೂ ನಡೆದುವು. ಕಿಟ್ಟುವಿಗೆ ಇದೊಂದೂ ಅರ್ಥವಾಗಲಿಲ್ಲ. ಭೀಷ್ಮ, ದ್ರೋಣ, ಅಭಿಮನ್ಯು ಮುಂತಾದ ಮಹಾನಾಯಕರ ಮರಣವನ್ನು ಕಂಡು ಧರ್ಮರಾಯ ಮಹಾಯುದ್ಧ ನಿಲ್ಲಿಸಬಹುದಾಗಿತ್ತು. ಆದರೆ, ಕುರುಪತಿ ಅದಕ್ಕೆ ಸಿದ್ಧನಿದ್ದರೂ ಇರಬಹುದಾಗಿತ್ತು. ಆದರೆ, ಹಾಗಾಗಲಿಲ್ಲ. ಭಾರತದ ಇತಿಹಾಸದಲ್ಲಿ ಯಾವ ಸಮರವೂ ಈ ರೀತಿ ನಡೆದಿರಲಿಲ್ಲ. ಸಂಧಾನ ವೈರಿಯ ಶಕ್ತಿಸಂಚಯನ ಸಾಧನ ಎಂಬದು ಭಾರತೀಯರಿಗೆ ತಿಳಿದಿತ್ತು. ಆದರೆ ಈಗ ಹಾಗಾಗಲಿಲ್ಲ. ನಮ್ಮ ಹೋರಾಟ

ಅನಂತವಾದ ಹೋರಾಟವಾಗಲಿಲ್ಲ; ಹತ್ತು ವರ್ಷಕ್ಕೊಮ್ಮೆ ತಲೆ ಎತ್ತಿ ಬಾಲವೆತ್ತಿ, ಹೋರಾಡುವ ಆಟವಾಗಿತ್ತು. ಕಿಟ್ಟು ಈ ಆಟ ಸರಿ ಎಂದು ನಂಬಲು ಸಿದ್ಧವಾಗಲಿಲ್ಲ. ರಾಜಕೀಯ ಈ ದಾರಿಗೆ ಇಳಿದಾಗ ಅದು ಜೀವನದ ಉನ್ನತಿಯ ಸಾಧನವಾಗಲಾರದು; ಅನಂತವಾದ ಹೋರಾಟವು ನಿತ್ಯಸತ್ಯವಾದ ಜೀವನಕ್ಕೂ ಇದಕ್ಕೂ ಸಂಬಂಧ ದೂರವಾಗುತ್ತದೆ ಎಂದಾತ ತಿಳಿದುಕೊಂಡ. ತಾನೂ ಜೀವನದ ಹೋರಾಟಕ್ಕೆ ಇಳಿದ. 'ಪಾಂಚಜನ್ಯ' ಪತ್ರಿಕೆಯಲ್ಲಿ ಉಪಸಂಪಾದಕನಾಗಿ ಸೇರಿಕೊಂಡ.

ಒಂದು ವರ್ಷ ತಾನು ತನ್ನ ದೇಹವನ್ನು ಪೋಲೀಸರ ಲಾಥಿ ಏಟು ತಿಂದು ದಂಡಿಸಿಕೊಳ್ಳುವ ಬದಲಾಗಿ ಸಮಾಜದ ಸೇವೆಯ ಮೂಲಕ ದಂಡಿಸಿಕೊಂಡಿದ್ದರೆ ಹಿತವಾಗಿತ್ತು ಎಂದವನಿಗೆ ಅನಿಸದಿರಲಿಲ್ಲ. ಅವನ ನೂರು ರಚನಾತ್ಮಕ ಯೋಜನೆಗಳಿಗೆ ಪಾಂಚಜನ್ಯ ಅಸ್ತಿಭಾರವಾಯಿತು.

ಪತ್ರಿಕೆಯ ಕೆಲಸ ಅವನಿಗೆ ನಿಶ್ಚಿತವಾದ ಜೀವನಮಾರ್ಗವನ್ನು ಕಲ್ಪಿಸಿಕೊಟ್ಟಿತು. ಸಾಹಿತ್ಯ ಸೇವೆಯ ಜತೆಗೆ ಸಮಾಜ ಸೇವೆಯನ್ನು ಸೇರಿಸಲು ಸಾಧಕವಾಯಿತು. ಬೊಕ್ಕಪಟ್ಣದಲ್ಲಿ ಎಲ್ಲರ ಅಭಿಮಾನಕ್ಕೂ ಪಾತ್ರನಾಗಿದ್ದ ಆತನಿಗೆ ಆ ಪ್ರದೇಶದಲ್ಲಿ ತನ್ನ ಪಾಲಿನ ಕರ್ತವ್ಯ ನಿರ್ವಹಣೆ ಅಸಾಧ್ಯವಾಗಿರಲಿಲ್ಲ. ಎಂತಲೇ ವಯಸ್ಕರ ಕೇಂದ್ರ, ವಾಚನಾಲಯಗಳು ಅಲ್ಲಿ ಸ್ಥಾಪಿತವಾದುವು. ಮುಖವೀರ ಯುವಕ ಸಂಘವೂ ಸ್ಥಾಪಿತ ವಾಯಿತು. ನೂರಾರು ಮಂದಿ ಓದುಬರೆಹ ಕಲಿತರು. ವ್ಯಾಯಾಮ ಶಿಕ್ಷಣ ಪಡೆದರು. ತಮ್ಮ ತಮ್ಮೊಳಗಣ ಕಲಹ ವಿರಸಗಳನ್ನು ಮರೆತು ಸಂಘಟಿತರಾದರು. ಭಜನಾಮಂದಿರಗಳೂ ತಲೆ ಎತ್ತಿದುವು; ಅವು ರಾಜ ಕೀಯ ವಿಚಾರ ಪ್ರಚಾರದ ಕೇಂದ್ರಗಳಾದುವು.

ಕಿಟ್ಟು ತನ್ನ ಹೋರಾಟಕ್ಕೆ ಸಮಾಜದ ನಾನಾ ಕುಂದು ಕೊರತೆ ಗಳನ್ನು ಸಾಧನ ಮಾಡಿಕೊಂಡು, ಜನತೆಯ ಜೀವನದಲ್ಲಿ ಹೊಸ ಬೆಳ ಕನ್ನೂ ಉತ್ಸಾಹವನ್ನೂ ಹರಡಿಸಿದ. ಆದರೆ ಈ ಹೋರಾಟ ರಾಜಕೀಯ ವಾಗುತ್ತೆ ಎಂದು ಅವನೆಂದೂ ತಿಳಿದಿರಲಿಲ್ಲ. ಸಾಮಾಜಿಕ ಸಂಘ ಸಂಸ್ಥೆ ಗಳ ಜತೆಗೆ ಹಂಚಿನ ಕಾರ್ಖಾನೆಗಳ ಕೂಲಿಗಾರರನ್ನು ಸಂಘಟಿಸುವ ಕೆಲಸ ವನ್ನೂ ಆತ ಆರಂಭಿಸಿದ. ಕೂಲಿಗಾರರಿಗೆ ಆಗುತ್ತಿದ್ದ ಅನ್ಯಾಯ, ಮೋಸ; ಮಾಲಿಕರ ಕುತಂತ್ರಗಳನ್ನು ಅವನು ಇದಿರಿಸಬೇಕಾಯಿತು. ದುಡಿಯು

ವವನು ತನಗೆ ಸಲಬೇಕಾದ ಕೂಲಿಯನ್ನು ಕೇಳಿದಾಗ ಅದು ರಾಜಕೀಯ ವಾಗುತ್ತೆ ಎಂದು ಅವನು ತಿಳಿದಿರಲಿಲ್ಲ. ತನಗೆ ಸಲಬೇಕಾದ ಹಣವನ್ನು ಕೇಳಲು, ಅಥವಾ ಅದಕ್ಕಾಗಿ ದಾವೆ ಹೂಡಿದಾಗ ಅದು ನ್ಯಾಯವಾದ ದಾರಿಯಾಗುತ್ತೆ, ಸಿವಿಲ್ ವ್ಯವಹಾರವಾಗುತ್ತೆ. ಆದರೆ, ಕೂಲಿಗಾರ ತನಗೆ ಸಲಬೇಕಾದ ಕೂಲಿ ಕೊಡಿ ಎಂದರೆ ಅದು ಅನ್ಯಾಯವಾಗುತ್ತೆ, ಆ ಕೂಲಿ ಕೊಡುವಂತೆ ಮಾಲಿಕನನ್ನು ಒತ್ತಾಯ ಪಡಿಸಲು ಆತ ಸತ್ಯ ಅಹಿಂಸೆ ಶಾಂತಿಗಳ ದಾರಿಯಲ್ಲಿ ಮುಷ್ಕರವೆಂಬ ಸತ್ಯಾಗ್ರಹ ಹೂಡಿದರೆ ಅದು 'ಕ್ರಿಮಿನಲ್' ಆಗುತ್ತೆ. ಈ ಸಮಸ್ಯೆ ಕಿಟ್ಟುವಿಗೆ ಅರ್ಥವಾಗಲಿಲ್ಲ. ಅರ್ಥವಾದಾಗ, ಅನ್ನ ಬಟ್ಟೆ ಆರ್ಥಿಕ ಸಮಾನತೆಗಾಗಿ ಹೋರಾಡುವುದೇ ನಿಜವಾದ ರಾಷ್ಟ್ರೀಯ ರಾಜಕೀಯ ಹೋರಾಟ, ಸ್ವಾತಂತ್ರ್ಯ ಸಮರ ಎಂದು ಆತ ತಿಳಿದುಕೊಂಡ.

ಕಿಟ್ಟುವಿನ ಜೀವನ ಸಾವಿರ ಚಟುವಟಿಕೆಗಳಿಂದ ತುಂಬಿತು. ಹಗಲಿರುಳೂ ಜನತೆಗಾಗಿ ದುಡಿಯುವುದೇ ಅವನಿಗೆ ಸುಖವಾಗಿ ಕಂಡಿತು. ಜೀವನಕ್ಕಾಗಿ ಉದ್ಯೋಗ ಅವನಿಗೆ; ಉದ್ಯೋಗಕ್ಕಾಗಿ ಜೀವನವಲ್ಲ. ಆ ಉದ್ಯೋಗ ಮುಗಿಯಿತೆಂದರೆ ಜನತೆಯ ಹಿತಕ್ಕಾಗಿ ದುಡಿಮೆ. ಈ ರಂಗದಲ್ಲಿ ಕಾಲಿಟ್ಟ ಅವನಿಗೆ ವರುಷಗಳುರುಳಿದುದೇ ತಿಳಿಯದಾಯಿತು. ನಾಲ್ಕು ವರುಷಗಳು ಎಷ್ಟು ಬೇಗ ಉರುಳಿದುವೋ, ಅಂತೂ ನಾಲ್ಕಾರು ಕಾರ್ಮಿಕ ಸಂಘಗಳ ಅಧ್ಯಕ್ಷನಾಗಿ ಆತ ಚುನಾಯಿತನಾದಾಗಲೇ ತಾನು ದುಡಿದುದರ ಅರಿವು ಅವನಿಗಾದುದು.

ಮಂಗಳೂರಿನ ದೀನ ದಲಿತರ, ಕಾರ್ಮಿಕರ ಕೈದೀಪವಾಗಿ ನಿಂತ ಕಿಟ್ಟು. ಅವನಿಗೆ ತನ್ನ ಸುಖ, ತನ್ನ ಸ್ವಾರ್ಥಗಳ ನೆನಪೇ ಬರಲಿಲ್ಲ. ಯಾರೇ ಅವನೆಡೆ ಬರಲಿ, ಬೆಳಕು ಕೊಡುವುದು, ದಾರಿ ತೋರುವುದು ಅವನ ಧರ್ಮವಾಯಿತು.

ಎಂತಲೇ ನಗರದ ಮಹಾಜನ ನಾಯಕನಾದ; ಎಲ್ಲರ ಮಿತ್ರನಾದ ಕಿಟ್ಟು.

# ಹನ್ನೆರಡು

ಕಾರ್ಮಿಕರ ಸಭೆ ನಡೆಸಲೆಂದು ಕಿಟ್ಟು ಶನಿವಾರ ಸಂಜೆ ಕುಲಶೇಖರಕ್ಕೆ ತೆರಳಿದ್ದ. ಬೀಡಿ ಕೆಲಸಗಾರರ ಅಂದಿನ ಸಭೆ ಮುಗಿಯುವ ವೇಳೆಗೆ ರಾತ್ರೆ ಹತ್ತು ಘಂಟೆಯಾಗಿತ್ತು. ಅಷ್ಟು ಹೊತ್ತಿನಲ್ಲಿ ನಾಲ್ಕು ದೂರದ ಬೊಕ್ಕಪಟ್ಣಕ್ಕೆ ಹೋಗುವ ಉತ್ಸಾಹ ಅವನಲ್ಲಿರಲಿಲ್ಲ. ಶೀನಪ್ಪ ಮತ್ತಿತರರ ಉಪಾಹಾರದಾನ ಅವನ ಹಸಿವನ್ನು ಅಡಗಿಸಿತ್ತು. 'ಇಲ್ಲೇ ಇದ್ದು ಬಿಡಿ ಸ್ವಾಮಿ, ನಮ್ಮ ಯಕ್ಷಗಾನ ಕೂಟ ಇದೆ' ಎಂದು ಹೊಟೇಲ್ ವೆಂಕಟ್ರಾಯರೂ ಕುಂಡನ್ ಭಟ್ರೂ ಒತ್ತಾಯ ಪಡಿಸಿದರು. ಕಿಟ್ಟು ಅಲ್ಲೇ ಉಳಿಯಬೇಕಾಯಿತು.

ಮುಂಜಾನೆ ಕಾಫಿ ತೀರಿಸಿ ಕಾರ್ಮಿಕ ಗೆಳೆಯರನ್ನೆಲ್ಲ ಬೀಳ್ಕೊಟ್ಟು ಕಿಟ್ಟು ಹೊರಟ. ಯಾವುದೋ ಯೋಚನೆಯಲ್ಲಿ ಅವನು ಲೀನವಾಗಿ ದಾರಿ ನಡೆಯುತ್ತಿದ್ದ. ಅವನ ಕಾಲು ತನ್ನ ಸ್ವಾತಂತ್ರ್ಯ ಉಪಯೋಗಿಸಿ, ಕದ್ರಿ ದೇವಸ್ಥಾನದ ಕಡೆಗೆ ತಿರುಗಿತ್ತು. ಸ್ವಲ್ಪ ದೂರ ನಡೆವಾಗಲೇ ಕಂಪಾಜಿಟರ್ ಸುಂದರ ಅವನನ್ನು ತಡೆದ.

"ನಮ್ಮ ಪ್ರೆಸ್ಸಿನಲ್ಲಿ ನಿನ್ನೆ ತುಂಬ ಗಲಭೆ ಸ್ವಾಮಿ"

"ಅಂದರೆ . . . . "

"ನಾಲ್ಕು ಜನರನ್ನು ಕೆಲಸದಿಂದ ತಳ್ಳಿದರು. ನಾವು ಎಲ್ಲರೂ ಒಂದುಗೂಡಿ, ಕಾರಣ ಕೇಳಲು ನಡೆದಾಗ, ಮ್ಯಾನೇಜರ್ ಮನಬಂದಂತೆ ಬೈದರು"

"ಕಾರಣ ಹೇಳಲು ಸಾಧ್ಯವಾಗದಾಗ ಬಯ್ಯುವುದು ಅವರ ನೀತಿ. ಅದಿರಲಿ, ಆ ಬಳಿ . . . . "

"ಆ ಬೈಗಳು ಕೇಳಿ ಹೆಚ್ಚಿನವರು ಅಡಗಿಕೊಂಡರು. ನಾನೂ ಸುಮ್ಮನಾಗಿ ಹಿಂತಿರುಗಬೇಕಾಯಿತು."

"ಈ ರೀತಿಯಾಗಿ ನಡೆದರೆ, ಬೈಗಳಿಗೇ ಹೆದರಿದರೆ, ನಿಮ್ಮ ಜೀವನ ಹೇಗೆ ಸಾಗೀತು? ಡಬ್ಬೆ ಬಾರಿಸಿ ಹುಲಿಯನ್ನು ಹೆದರಿಸುತ್ತಾರಂತಲ್ಲ ಹಾಗಾಯಿತು . . . . " ಎಂದು ಕಿಟ್ಟು ಕೆಲಸಗಾರರ ಬಗೆಗೆ ತಿಳಿಸಿದ. ಪ್ರೆಸ್ ಕೆಲಸಗಾರರ ಸಂಘಟನೆಯಾಗಬೇಕು, ಅದಕ್ಕಾಗಿ ಕೆಲಸಗಾರರನ್ನೆಲ್ಲ ಕಂಡು

ವಿಚಾರವಿನಿಮಯ ಮಾಡು ಎಂದು ಸುಂದರನನ್ನು ಆತ ಬೀಳ್ಕೊಟ್ಟ. ಹಾಗೇ ತನ್ನ ದಾರಿ ಹಿಡಿಯಲು ತಿರುಗಿದಾಗ ಪಕ್ಕದ ತೋಟದ ಗೋಡೆಯ ಹಿಂದೆ ಯಾರೋ ನಿಂತು ಅವನನ್ನೇ ನೋಡುತ್ತಿದ್ದುದು ಕಂಡು ಬಂತು.

ಕಿಟ್ಟಿ ಆ ಕಡೆ ನೋಡಿದೊಡನೆ ಆ ಗೋಡೆಯ ಹಿಂದೆ ನಿಂತಿದ್ದ ತರುಣಿ ನಕ್ಕಳು. ಕಿಟ್ಟಿ ಬೆಚ್ಚಿಬಿದ್ದು ಸುತ್ತಲೂ ನೋಡಿದ. ಯಾರೂ ಇಲ್ಲವಾದುದನ್ನು ಕಂಡು ಆಕೆ ತನ್ನನ್ನೇ ನೋಡಿ ನಕ್ಕಿರಬೇಕೆಂದು ಅವನು ನಿರ್ಧರಿಸಿದ.

ತರುಣಿ ನಮಸ್ಕರಿಸಿದಳು.

ಕಿಟ್ಟಿ ಇನ್ನೊಮ್ಮೆ ಸುತ್ತಲೂ ನೋಡಿ ನಮಸ್ಕರಿಸಿ ಅವಳೆಡೆ ನಡೆದ.

"ತಾವು ಕೃಷ್ಣರಾಯರು ಅಲ್ಲವೇ ಸಾರ್?"

"ಹೌದಮ್ಮ. . . . ನೀವು . . . ."

"ನಿಮ್ಮ ಸಾಹಿತ್ಯ ಓದುತ್ತಿರುವವಳು–ಒಬ್ಬಳು. ಎಂದೋ ಒಮ್ಮೆ ನಾವು ಎಲ್ಲೋ ಭೇಟಿಯಾಗಿದ್ದೆವು . . . . ನಾಲ್ಕಾರು ವರುಷಗಳ ಹಿಂದೆ ಇರಬಹುದೇನೋ . . . ."

"ಏನಾಗಬೇಕು . . . ."

"ನಮ್ಮ ತಾಯಿ ನಿಮ್ಮನ್ನು ನೋಡಬೇಕೆಂದು ಬಯಸಿದ್ದಾಳೆ. ಬರುತ್ತೀರಾ . . . ."

ತನ್ನ ಮನೆಗೆ ಕಿಟ್ಟಿಯನ್ನು ಕರೆದೊಯ್ಯಲು ಅವಳಿಗೆ ಬೇರೆ ಉಪಾಯ ಕಾಣಲಿಲ್ಲ. ಈ ಅಸ್ತ್ರಕ್ಕೆ ಕಿಟ್ಟಿ ಸೋತ. ಅವನಿಗೆ ಬಡವರ ಮನೆಗಳೆಲ್ಲ ತನ್ನ ಮನೆ. ಯಾವ ಮನೆಗೂ ಹೋಗುವ ಸ್ವಾತಂತ್ರ್ಯವಿದೆ. ಎತ್ತ ಹೋದರೂ ಗೋಳಿನ ಕತೆಕೇಳಿ ಹಿಂತಿರುಗುವುದು ಅವನ ಜೀವನ. ಇಂದೂ ಏನೋ ಕತೆ ಕೇಳಲಿದೆ ಎಂದು ಆತ ಹಿತ್ತಲಿನೊಳಗೆ ನಡೆದು ಮನೆಯನ್ನು ಸೇರಿದ.

ಒಂದು ಹತ್ತಡಿ ಉದ್ದಗಲದ ಚಾವಡಿ, ಎರಡಡಿ ಗೋಡೆ ಕಟ್ಟಿ ಮುಂದೆ ಗೋಡೆಯ ಬದಲು ಬಿದಿರ ತಡಿಕೆ ಕಟ್ಟಿದ್ದರು. ಅಲ್ಲೊಂದು ಮೇಜು, ಎರಡು ಕುರ್ಚಿಗಳು, ಮೇಜಿನ ತುಂಬ ಪುಸ್ತಕಗಳು. ಅವುಗಳ ನಡುವೆ ಒಂದು ಫ್ಲವರ್ ವಾಸ್. ಕಾಗದದ ಒಂದೆರಡು ಗುಲಾಬಿ ಹೂ

ವಾದ ಗುಲಾಬಿ ಹೂಗಳೂ ಇವೆ. ಕಿಟ್ಟು ಚಾವಡಿ ಸೇರಿದ.

ಆಕೆ ಅವನನ್ನು ಕುಳಿತುಕೊಳ್ಳಲು ಕೇಳಿಕೊಂಡು ಪಕ್ಕದ ಕೋಣೆಗೆ ನಡೆದಳು. ಅದೇ ಅಡುಗೆ, ಊಟಗಳ ಮನೆಯಿರಬೇಕು. ಆ ಪುಟ್ಟ ಗುಡಿಸಲ ಅರ್ಧಭಾಗ ಇದ್ದಂತಿತ್ತು ಅದು. ಕಿಟ್ಟು ಕುರ್ಚಿಯ ಮೇಲೆ ಕುಳಿತುಕೊಂಡು ಒಂದು ಪುಸ್ತಕವನ್ನು ಕೈಗೆತ್ತಿ ನೋಡಲಾರಂಭಿಸಿದ. ಅವನ ದೃಷ್ಟಿ ಆ ಹೂವಿನ ಗುಚ್ಛ, ಪುಸ್ತಕಳು, ಕೋಣೆ, ಹೊರಗೆ ಅಂಗಳ ಗಳೆಡೆಗೆ ಕುಪ್ಪಳಿಸುತ್ತಿತ್ತು.

ತಾಯಿ ಹೊರಬಂದು ಬಾಗಿಲಲ್ಲಿ ನಿಂತರು.

ತನ್ನ ಮಗಳ ಸಾಹಿತ್ಯ ಪ್ರೇಮ, ತಮ್ಮ ಸಂಸಾರ ತಾಪತ್ರಯಗಳ ಬಗೆಗೆ ಹೇಳಿಕೊಂಡರು. ಈ ಮನೆ, ಇಲ್ಲಿನ ಸುತ್ತುಮುತ್ತಲ ಜನ, ಎಲ್ಲ ವಿಚಾರಗಳೂ ಒಂದೊಂದಾಗಿ ಹೊರಟುವು.

"ನಿಮ್ಮ ಮನೆ ಎಲ್ಲೋ . . . ."

"ಬೊಕ್ಕಪಟ್ಣದಲ್ಲಿ."

"ತಂದೆ . . . . ತಾಯಿ . . . . ."

"ಯಾರೂ ಇಲ್ಲವಮ್ಮ. ತಾತನಿದ್ದಾರೆ."

ಕಿಟ್ಟು ನಾಲ್ಕು ಮಾತಿನಲ್ಲಿ ತನ್ನ ಬಗೆಗೆ ಹೇಳಿ ಆ ತಾಯಿಯ ಬಾಯಿ ಯಿಂದ ಅನುತಾಪ ಹೊರಡಿಸಿದ.

"ನಿಮ್ಮ ಕತೆಗಳು ತುಂಬ ಚೆನ್ನಾಗಿವೆ. ನಮ್ಮ ವಿಮಲನಿಗೆ ಅದೇ ಕೆಲಸ. ದಿನಕ್ಕೊಂದು ಪತ್ರಿಕೆ ತಂದು ಹಾಕುತ್ತಿರುತ್ತಾಳೆ. ನೀವು ಒಂದು ದಿನ ಬಲ್ಮಟದಲ್ಲಿ ಭೇಟಿಯಾದಿರಂತೆ . . . . ಮಳೆ ಬಂದಾಗ ಅಂಗಡಿ ಬಾಗಿ ಲಲ್ಲಿ ನಿಂತಿದ್ದಾಗ . . . . ."

ಮಳೆ, ಅಂಗಡಿ, ತಂದೆ, ತಾಯಿ . . . . ಈ ವಿಚಾರಗಳು ಕಿಟ್ಟುವಿನ ಯೋಚನೆಯನ್ನು ಕೆರಳಿಸಿದುವು. ಕಳೆದ ದಿನಗಳ ನೆನಪು ಒಂದೊಂದಾಗಿ ಅವನ ಮನದಲ್ಲಿ ಮೂಡಿ ಮಾಯವಾಯಿತು. ತಾನು ಹೇಗಿದ್ದೆ, ಹೇಗಾದೆ . . . . ಎಂಬುದೇ ಅವನಿಗೊಂದು ಕಾದಂಬರಿಯಾಗಿ ಕಂಡಿತು. ಬೀಡೀ ಬೀಡಾ . . . . ಒಂದು ಬೀಡ ಕೊಡು, ಒಂದು ಎಲಿಫೆಂಟ್ ಸಿಗರೇಟ್ . . . . . ಎಂದು ಜನ ತನ್ನನ್ನು ಕರೆದು ತನ್ನಿಂದ ಬೇಕಾದುದನ್ನು ಕೊಳ್ಳುತ್ತಿದ್ದರು. ಈಗ . . . . . ಅದೇ ಹುಡುಗನನ್ನು ಹತ್ತಿರ ಕರೆದು . . .

ನಮ್ಮ ಸ್ಥಿತಿ ಹೀಗೆ, ನಮ್ಮ ಗೋಳು ಹಾಗೆ, ಎಂದು ತಮ್ಮ ಸಮಸ್ಯೆಗಳನ್ನು ತಿಳಿಸಿ ಪರಿಹಾರ ಅಪೇಕ್ಷಿಸುತ್ತಾರೆ. ಬೇಸರವಾದ ಜನ ಬೇಸರ ಕಳೆಯಲು ಬೀಡಿ ಸಿಗರೇಟು ಸೇದುತ್ತಿದ್ದರು.... ಇಂದು ಅವರ ಬೇಸರ ನೀಗಲು ವಿಚಾರಧಾರೆಯನ್ನು ತಾನು ದಾನಮಾಡುತ್ತಿದ್ದೇನೆ...... ಕಿಟ್ಟು ತನ್ನ ದುರಂತಮಯ ಜೀವನದ ಬಗೆಗೆ ಯೋಚಿಸುತ್ತಿದ್ದಂತೆ, ಆ ಯೋಚನೆಯನ್ನು ತೀವ್ರಗೊಳಿಸಲು ತೀಕ್ಷ್ಣಗೊಳಿಸಲು ಸಹಾಯಕವಾಗಿ ಆ ತಾಯಿ ತಮ್ಮ ಬಾಳಿನ ಕತೆ ಹೇಳುತ್ತಿದ್ದರು.

"ಧನಿಕರಾಗಿ ಹುಟ್ಟಿ, ಮೆರೆದು ಬಡವರಾಗಿ ಬಾಳುತ್ತಿದ್ದೇವೆ...."

"ಅದನ್ನೆಲ್ಲ ಹೇಳಿಕೊಂಡೇನು? ನಿನಗದೇ ಕೆಲಸ. ಯಾರು ಬಂದರೂ ಹಳೆಯ ಕತೆ...." ಎಂದು ನುಡಿಯುತ್ತ ವಿಮಲ ಕಾಫಿ ತಂದು, ಮೇಜಿನ ಮೇಲಿದ್ದ ಪುಸ್ತಕಗಳನ್ನು ಬದಿಗೆ ಸರಿಸಿ, ಅದರ ಮೇಲಿಟ್ಟಳು.

"ಹಳೆಯ ಚಿಂತೆ ಒಳಗೆ ಕುದಿದು ನಿಂತಾಗ ಅದು ಜ್ವಾಲಾಮುಖಿಯಂತೆ ಪುಟನೆಗೆಯುತ್ತೆ. ಹಾಗೆ ನೆನೆದು ಹೃದಯ ಬರಿದಾದಾಗಲೇ ಮನುಷ್ಯನಿಗೆ ಶಾಂತಿ" ಎಂದು ಕಿಟ್ಟು ಇಬ್ಬರನ್ನೂ ಶಾಂತಗೊಳಿಸಿದ.

"ಈಕೆ ಈಗೇನು ಮಾಡುತ್ತಿದ್ದಾರೆ" ಎಂದು ಕಾಫಿ ಲೋಟವನ್ನು ಕೈಗೆತ್ತಿಕೊಳ್ಳುತ್ತಿದ್ದಂತೆ ಕಿಟ್ಟು ಪ್ರಶ್ನಿಸಿದ. ಅವನ ದೃಷ್ಟಿ ಒಮ್ಮೆ ಅವರಿಬ್ಬರ ಮೇಲೂ ಹರಿದು ಗುಲಾಬಿ ಹೂವಿನ ಕಡೆಗೆ ಬಂತು.

"ಉಪಾಧ್ಯಾಯಿನಿಯಾಗಿದ್ದಾಳೆ. ಜೀವನ ಸಾಗಬೇಕಷ್ಟೆ"

"ಅದು ಒಳ್ಳೇ ದಾರಿ. ಆದರೆ,-ಮುಂದೆಯೂ ಕಲಿಯುತ್ತಿದ್ದರೆ ಚೆನ್ನಾಗಿತ್ತಲ್ಲವೇ?" ಎನ್ನುತ್ತಿದ್ದಂತೆ ಕಿಟ್ಟುವಿನ ದೃಷ್ಟಿ ಕಾಗದದ ಗುಲಾಬಿ ಹೂವಿನ ಬಳಿ ಸರಿಯಿತು. ಅದರ ತೊಟ್ಟಿಗೆ ಏನೋ ಒಂದು ವಸ್ತು ಕಟ್ಟಿದ್ದರು. ಕಿಟ್ಟು ಅದನ್ನೇ ನೋಡಿದ; ಅವನ ಕುತೂಹಲ ಕೆರಳಿತು.

"ಇದೇಕೆ ಇಲ್ಲಿ; ಯಾರಾದರೂ ಎತ್ತಿಕೊಂಡರೆ"

"ಅದು ಬಂಗಾರದ್ದಲ್ಲ. ಈಕೆ ಚಿಕ್ಕವಳಾಗಿದ್ದಾಗ ಆಟಕ್ಕೆಂದು ತಂದೆ ತೆಗಿಸಿಕೊಟ್ಟರಂತೆ. ಎಲ್ಲವೂ ಹೋದರೂ ಅದು ಮಾತ್ರ ಉಳಿದಿತ್ತು. ಒಗೆದು ಬಿಡಬಾರದೆಂದು ಅವಳು ಅದನ್ನು ಹಾಗೆ ಕಟ್ಟಿರಬೇಕು."

"ಅದು ನನಗೆ ಹಳೆಯ ನೆನಪನ್ನು ಕೊಡುತ್ತದೆ ಸಾರ್. ನಾನು ದಾರಿ ತಪ್ಪದಂತೆ, ಜೀವನದ ಹೋರಾಟ ನಡೆಸುವಂತೆ, ಸಹಾಯಕವಾದ

ರಕ್ಷೆ". ಎಂದಳು ವಿಮಲ.

"ಬಂಗಾರದಂತೇ ಇದೆ; ಆದರೆ ಬಂಗಾರವಲ್ಲ ಎನ್ನುತ್ತಿದ್ದೀರಿ. ಮನುಷ್ಯರು ಹೀಗೇ ತಾಯಿ. ಹೊರಗಿನ ಥಳಕಿಗೆ ಸೋತು ಹಾಳಾಗುತ್ತಾರೆ."

"ಬುದ್ಧಿಯಿಲ್ಲದ ಮಕ್ಕಳಿಗೆ ಇದೇ ಬಂಗಾರವಾಗುತ್ತದೆ, ಬುದ್ಧಿ ತಿಳಿದಾಗ ಬಂಗಾರ ಯಾವುದು ಹಿತ್ತಾಳೆ ಯಾವುದು ಎಂಬುದು ತಿಳಿದು ಬಂದು ಅವರು ಸರಿದಾರಿ ತುಳಿಯುತ್ತಾರೆ. ಇದೂ ಹಾಗೇ ಆಯಿತು. ಯಾರೋ ಬೀಡಿ ಬೀಡಾ ಮಾರಾಟ ಮಾಡುವ ಹುಡುಗನಿಂದ ಹಟಮಾಡಿ ವಿಮಲ ಕಿತ್ತುಕೊಂಡಳಂತೆ–ಅವಳು ಮಗುವಾಗಿದ್ದಾಗ."

ಬೀಡಿ–ಬೀಡಾ ಹುಡುಗ ....... ಕಿಟ್ಟುವಿನ ಯೋಚನೆ ತನ್ನ ಕಡೆಗೇ ಸರಿದು ಹಳೆಯ ಜೀವನದ ಚಿತ್ರಗಳು ಅಲೆಯಲೆಯಾಗಿ ಅವನ ಮುಂದೆ ಸುಳಿದುವು. ಆ ಯೋಚನೆಗಳನ್ನು ದೂರ ಸರಿಸಲು ಅವನು ಮಾಡಿದ ಯತ್ನಗಳೆಲ್ಲ ವಿಫಲವಾದುವು.

"ಏನು ಯೋಚನೆ ..... ಅಗತ್ಯ ಕೆಲಸವಿತ್ತೋ ಏನೋ?

"ಇಲ್ಲ ......" ಎಂದು ಫಕ್ಕನೆ ಎಚ್ಚರಗೊಂಡವನಂತೆ ಕಿಟ್ಟು ನುಡಿದ.

"ತಮ್ಮನ್ನು ಈ ಮನೆಗೆ ಕರೆದು ಸತ್ಕರಿಸಬೇಕು ಎಂದಷ್ಟೆ ಕರೆದೆ. ಅಮ್ಮ ಹೇಳುತ್ತಿದ್ದಳು, ಚೆನ್ನಾಗಿ ಬರೆಯುತ್ತಾರೆ, ದೇವರು ಒಳ್ಳೆಯದು ಮಾಡಲಿ ಎಂದು. ಆ ಬರೆಯುವವರನ್ನು ತೋರಿಸುತ್ತೇನೆ ಎಂದು ಕರೆದೆ. ಕ್ಷಮಿಸಿ"

"ಅದರಲ್ಲೇನು? ನನ್ನ ಕೆಲಸಕ್ಕೆ ಅಂತ್ಯವಿಲ್ಲ. ಆದರೆ ..... ಇಂಥ ತಾಯಿ ನನಗೂ ಒಬ್ಬಳಿದ್ದರೆ ನಾನು ಎಷ್ಟು ಹೆಚ್ಚಾಗಿ ದುಡಿಯುತ್ತಿದ್ದೆನೋ ಯೋಚಿಸುತ್ತಿದ್ದೆ.! ತಾಯಿಯಿಲ್ಲದ ಬಾಳು .... ಬಾಳಲ್ಲ ...."

"ಸುಮ್ಮನೆ ಹೇಳುತ್ತಾರೆ–ಆದರೆ ತಾಯಿ ಇದ್ದರೂ ಆಗುವುದಿಲ್ಲ. ತಾಯಿಯಿದ್ದವರಿಗೆ ತಾಯಿಯ ಮೇಲೆ ಮಮತೆ ಇರುವುದಿಲ್ಲ, ಇಲ್ಲವಾದವರಿಗೆ ಅಭಿಮಾನ–ಅಷ್ಟೆ" ಎಂದರು ಆ ತಾಯಿ.

"ನಿಜ ತಾಯಿ .... ನಾನಿನ್ನು ಬರಲೇ"

"ಆಗಲಿ. ಆಗಾಗ ಬರುತ್ತಿರಿ ಮಗೂ, ಇದು ನಿಮ್ಮ ಮನೆ. ಜನಸೇವೆಗಾಗಿ ಇಳಿದ ನೀವು ನೂರು ವರ್ಷ ಬಾಳಬೇಕು. ಆರೋಗ್ಯ ಚೆನ್ನಾಗಿ

ನೋಡಿಕೊಳ್ಳಿ."

ಕಿಟ್ಟು ಎದ್ದುನಿಂತು ಹೊರಡಲು ಅನುವಾದ. ಪುನಃ ಏನೋ ಯೋಚಿಸುತ್ತ ನಿಂತು ಹೂವಿನೆಡೆಗೇ ದೃಷ್ಟಿ ಹರಿಯಿಸಿದ. ಹಾಗೇ ತಿರುಗಿ ಇಬ್ಬರಿಗೂ ವಂದಿಸಿ ಹೊರಟ.

"ಈ ಕಡೆಗೆ ಬಂದಾಗ ಮನೆಗೆ ಬರಲು ಮರೆಯಬೇಡಿ ಸಾರ್" ಎಂಗಳು ವಿಮಲ.

"ಆಗಲಿ ಅಮ್ಮ."

ಕಿಟ್ಟುವಿಗೆ ಆ ಹೂವಿನ ಜಾಡಿಯ ದೃಶ್ಯವನ್ನು ಮರೆಯುವುದು ಸಾಧ್ಯವಾಗಲಿಲ್ಲ. ತನ್ನ ಹೋಟೆಲ್ ಜೀವನ, ತಾನು ಬೀಡೀ ಬೀಡಾ ಅಂಗಡಿ ಆರಂಭಿಸಿದುದು, ಮುಂದೆ ಮೈದಾನಿನಲ್ಲಿ ವ್ಯಾಪಾರ ನಡೆಸುವಾಗ ತನಗಾದ ನೂರಾರು ಅನುಭವಗಳ ನೆನಪು ಅವನಿಗಾಗುತ್ತ ಬಂತು ....

ಹೌದು ..... ಅದು ನನ್ನದು ....

ನಾಲ್ಕೈದು ದಿನ ಹೀಗೆ ತಡೆದ. ಮುಂದೆ ಸುಮ್ಮನಿರುವುದೂ ಆ ಹೂವುಗಳ ತೊಟ್ಟಿಗೆ ಕಟ್ಟಿದ್ದ ಆ ವಸ್ತುವನ್ನು ಮರೆಯುವುದೂ ಅವನಿಂದ ಸಾಧ್ಯವಾಗಲಿಲ್ಲ. ಅದು ತನ್ನ ಜೀವನದ ಇತಿಹಾಸ ಸಾರುತ್ತದೆ, ಅದನ್ನು ಕೊಡುತ್ತೀರಾ, ತಮಗೆ ಅದರ ಬಗೆಗೆ ಆಶೆ ಇದ್ದಂತಿಲ್ಲ ಎಂದು ಆತ ವಿಮಲ ನಿಗೆ ಪತ್ರ ಬರೆದ.

ಎಂಟು ದಿನಗಳ ಅನಂತರದಲ್ಲಿ ಉತ್ತರ ಬಂತು.

"..... ನಾನು ಸಂಪತ್ತಿನ ಸುಖದಲ್ಲಿ ನಲಿಯುತ್ತಿದ್ದಾಗ ಅದನ್ನು ತೆಗೆದುಕೊಂಡೆ. ಆ ಹುಡುಗ ನಾನು ಹಟಮಾಡೆ ಅತ್ತೆನೆಂದು ನನಗದನ್ನು ಕೊಟ್ಟ ಹಣ ಪಡೆಯಲಿಲ್ಲ. ನಿಕೃಷ್ಟನೆಂದು ನನ್ನ ತಂದೆಗೂ ನನಗೂ ಕಂಡಿದ್ದ ಆ ಸ್ವತಂತ್ರ ಜೀವಿಯ ನೆನಪು ನನಗೆ ಧೈರ್ಯವಿತ್ತು ಮುನ್ನಡೆ ಸುತ್ತಿದೆ. ಅವನಿಗಿಂತಲೂ ಕೀಳಾದ ಸ್ಥಿತಿಗಳಿಂದ ನಮಗೆ ಆ ಬೆಂಬಲ ಬೇಡವೇ? ನಿಮ್ಮ ಜೀವನಕ್ಕೆ ಇದು ಸಂಬಂಧಿಸಿದೆ ಎಂದಿದ್ದೀರಿ ...... ನನ್ನ ಇಂದಿನ ದಿನವನ್ನು ಹಿಂದೆಯೇ ಅರುಹಿದ ಆ ಭವಿಷ್ಯವಾದಿ ತಾವೇ ಏನು? ..... ನೀವೇ ಆದರೆ ಅದನ್ನು ಸಲ್ಲಿಸಲು ನನಗೆ ತುಂಬಾ ಆನಂದ ವಾಗುತ್ತದೆ ...... ಆದರೆ ...... ಅದು ಉಂಗುರ ..... ಅದನ್ನು ಹೆಣ್ಣು ಗಂಡಿಗೆ ಕೊಡಬೇಕು .. ... (ಕಥೆಗಾರರಾದ ನಿಮಗಿದರ ಅರ್ಥ